# ಚಂದಾದಾರರಾಗ ಬಯಸುವಿರಾ?

'ಇತಿಹಾಸ ದರ್ಪಣ'ದ ಚಂದಾದಾರರಾಗ ಬಯಸುವವರು ನಿಮ್ಮ ಆಯ್ಕೆಯ ಚಂದಾ ಹಣವನ್ನು ಡಿ.ಡಿ /ಚೆಕ್/ ಎಂ.ಓ ಮೂಲಕ ಕೆಳಕಂಡ ವಿಳಾಸಕ್ಕೆ ಕಳುಹಿಸಿ ಕೊಡಬಹುದು.

– ಡಿ.ಡಿ ಕಳುಹಿಸಿಕೊಡುವವರು "EDITOR, ITIHASA DARPANA" ಹೆಸರಿಗೆ ಬೆಂಗಳೂರಿನಲ್ಲಿ ಸಂದಾಯವಾಗುವಂತೆ ಡಿ.ಡಿ.ಯನ್ನು ತೆಗೆಸಿ, ಅದನ್ನು ನಿಮ್ಮ ವಿಳಾಸವುಳ್ಳ ಪತ್ರದೊಂದಿಗೆ ನಮಗೆ ಕಳುಹಿಸಿ ಕೊಡಿ.

– ಚೆಕ್ ಕಳುಹಿಸಿಕೊಡುವವರು ಚೆಕ್ಕನ್ನು "EDITOR, ITIHASA DARPANA" ಹೆಸರಿಗೆ ಬರೆದು, ಚೆಕ್ಕಿನ ಮೇಲ್ಭಾಗದ ಎಡಮೂಲೆಯಲ್ಲಿ "ಅಕೌಂಟ್ ಪೇ" ಎಂದು ನಮೂದಿಸಿ, ನಿಮ್ಮ ವಿಳಾಸದ ಪತ್ರದೊಂದಿಗೆ ಕಳುಹಿಸಿ. **ಬೆಂಗಳೂರಿನ ಹೊರಗಡೆಯ ಚೆಕ್ಕುಗಳಾಗಿದ್ದಲ್ಲಿ ಬ್ಯಾಂಕಿನ ಸೇವಾಶುಲ್ಕ ೩೦/– ರೂ.ಗಳನ್ನು** ಚಂದಾ ಹಣದ ಮೊತ್ತದಲ್ಲಿ ಸೇರಿಸಿ ಕಳುಹಿಸಿ ಕೊಡಬೇಕು.

–ಎಂ.ಓ ಮಾಡುವವರು ನಿಮ್ಮ ವಿಳಾಸವನ್ನು ಎಂ.ಓ ಅರ್ಜಿಯ ಮೇಲ್ಭಾಗದಲ್ಲಿರುವ ಸಂದೇಶ ಎಂಬ ಸ್ಥಳದಲ್ಲಿ ತಪ್ಪದೇ ನಿಮ್ಮ ವಿಳಾಸ ಬರೆಯಿರಿ. ಇ.ಎಂ.ಓ ಮಾಡಿದ್ದಲ್ಲಿ ಎರಡುದಿನಗಳ ನಂತರ ಕರೆಮಾಡಿ ನಿಮ್ಮ ವಿಳಾಸವನ್ನು ನಮಗೆ ತಿಳಿಸಿ.

– ಇಲ್ಲವಾದಲ್ಲಿ ಬೆಂಗಳೂರಿನ ಚಾಮರಾಜಪೇಟೆಯ ಅಪೆಕ್ಸ್ ಬ್ಯಾಂಕಿನ ಪ್ರಧಾನ ಶಾಖೆಯಲ್ಲಿರುವ "EDITOR, ITIHASA DARPANA" ಹೆಸರಿನ ಚಾಲ್ತಿಖಾತೆ **ಸಂ: 101 882 ಕ್ಕೆ** ಚಂದಾಹಣವನ್ನು ನಿಮ್ಮ ಹೆಸರಿನಲ್ಲಿ ಜಮಾ ಮಾಡಿ, ಸ್ವೀಕೃತಿಯ ನಕಲನ್ನು, ನಿಮ್ಮ ವಿಳಾಸದ ಪತ್ರದೊಂದಿಗೆ ನಮಗೆ ಕಳುಹಿಸಿಕೊಡಿ.

## ಚಂದಾ ವಿವರ

| |
|---|
| **ವಾರ್ಷಿಕ ಚಂದಾ** (ಅಂಚೆವೆಚ್ಚ ಸೇರಿ) – ೨೨೫/– ರೂ.ಗಳು. **(ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೩೫೦/–ರೂ.ಗಳು)** |
| **ದ್ವೈವಾರ್ಷಿಕ ಚಂದಾ** (ಅಂಚೆವೆಚ್ಚ ಸೇರಿ) – ೪೦೦/– ರೂ.ಗಳು. **(ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೬೫೦/–ರೂ.ಗಳು)**. |
| **ಆಜೀವ ಚಂದಾ** – ೩೦೦೦/– ರೂ.ಗಳು. **(ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೫೦೦೦/– ರೂ.ಗಳು)**. |

### ಚಂದಾ ಕಳುಹಿಸಿಕೊಡಬೇಕಾದ ವಿಳಾಸ:


| | |
|---|---|
| **ಸಂಪಾದಕರು, 'ಇತಿಹಾಸ ದರ್ಪಣ',**<br># ೩೩ ಎ, ಐ.ಟಿ.ಐ ಕಾಲೇಜು ಹತ್ತಿರ,<br>ಕೆಂಪೇಗೌಡನಗರ, ವಿಶ್ವನೀಡಂ – ಅಂಚೆ,<br>ಬೆಂಗಳೂರು–೫೬೦೦೯೧.<br>ಮೊ– ೭೮೨೯೪೦೪೦೬೩. | **The Editor, 'Itihasa Darpana'**<br># 33 A, Near I.T.I College,<br>Kempegowda Nagara,<br>Vishwaneedam-Post,<br>Bengaluru- 560091.<br>Mob- 7829404063 |

ISSN 2321 - 3590

# ಇತಿಹಾಸ  ದರ್ಪಣ

(ತ್ರೈಮಾಸಿಕ)

ಚರಿತ್ರಾಸಕ್ತರ ಅಂಕಣ

ಇತಿಹಾಸ ದರ್ಪಣ

(ತ್ರೈಮಾಸಿಕ)

*Itihasa Darpana*

**(Quarterly)**

ಪುಸ್ತಕ ೧೭

**Book 17**

ಏಪ್ರಿಲ್-ಜೂನ್-೨೦೧೩

**April-June-2013**

ಸಂಪಾದಕರು
ಹಂ.ಗು. ರಾಜೇಶ್
ಸಂ.ದೂ. : ೭೮೨೯೪೦೪೦೬೩

Editor
H.G Rajesh
Mob : 7829404063

ಉಪ ಸಂಪಾದಕರು
ಸುಂಕಂ ಗೋವರ್ಧನ
ರಶ್ಮಿ ಎಸ್.
ಶಿವಕುಮಾರಿ ಎಂ.ಎಸ್.

Sub Editors
Sunkam Govardhan
Rashmi S.
Shivakumari M.S.

ಅಕ್ಷರ ಜೋಡಣೆ
ಮಹೇಶ್ ಎಂ.
ಸಂ.ದೂ. : ೯೯೪೫೮೧೪೭೭೪

DTP
Mahesh M.
Mob : 9945814774

ಮುಖಪುಟ ವಿನ್ಯಾಸ
ಸುರೇಶ್‌ಕುಮಾರ್ ಎಚ್.
ಸಂ.ದೂ. : ೮೯೭೦೬೬೬೮೦೯

Cover Design
Sureshkumar H.
Mob : 8970666809

ಮುದ್ರಕರು
ಶ್ರೀ ರಂಗನಾಥ ಪ್ರಿಂಟರ್ಸ್
ಸಂ.ದೂ. : ೯೮೪೪೧೫೬೧೯೨

Printed at
Sri Ranganatha Printers
Mob : 9844156192

(ಖಾಸಗಿ ಪ್ರಸಾರಕ್ಕಾಗಿ)


*ಓದುಗರ ಸಲಹೆ-ಸೂಚನೆಗಳನ್ನು 'ಇತಿಹಾಸ ದರ್ಪಣ'ವು ಮುಕ್ತವಾಗಿ ಸ್ವಾಗತಿಸುತ್ತದೆ.*

*E-mail : **itihasadarpana@gmail.com***

*ಈ ಪತ್ರಿಕೆಯ ಲೇಖನಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಲೇಖಕರ ಅಭಿಪ್ರಾಯಗಳೇ ವಿನಃ ಪತ್ರಿಕೆಯ ಅಭಿಪ್ರಾಯವಲ್ಲ. -ಸಂ.*

"THE PUBLICATION OF THIS JOURNAL HAS BEEN FINANCIALLY SUPPORTED BY THE INDIAN COUNCIL OF HISTORICAL RESEARCH. THE RESPONSIBILITY FOR THE FACTS STATED OF OPINIONS EXPRESSED IS ENTIRELY OF THE AUTHOR AND NOT OF THE ICHR."

# ಪರಿವಿಡಿ. . .




NATIONAL INSTITUTE OF SCIENCE COMMUNICATION
AND INFORMATION RESOURCES
(Council of Scientific and Industrial Research)
14, Satsang Vihar Marg, New Delhi 110 067 &
Dr. K. S. Krishnan Marg (Near Pusa Gate) -110 012



Ms. V. V. Lakshmi, Head, National Science Library
Phone: 91-11-2686 3759
E-mail: vvlakshmi@niscair.res.in website: www.niscair.res.in

NSL/ISSN/INF/2013/1168 Dated: May 22, 2013

**Mr. Rajesh H. G.,**
**No. 33'A', Near ITI College,**
**Kempegowada Nagar,**
**Vishwaneedam,**
**Bangalore– 560091**

Dear Sir/ Madam,

We are happy to inform you that the following serial(s) published by you has been registered and assigned ISSN (Print)

ISSN 2321 – 3590 Itihasa Darpana

It is important that the ISSN should be printed on every issue preferably at the right hand top corner of the cover page.

The Indian National Centre will be responsible for monitoring the use of ISSN assigned to Indian Serials and for supplying up to-date data of the same to the International Centre for ISSN, Paris. For this purpose we request you to send us the forth coming issue of your serial on complimentary basis.

We solicit your co-operation in this regard.

Yours sincerely

V. V. Lakshmi
(V.V. Lakshmi)
Head
National Science Library

Please don't forget to send a sample issue of the journal/URL with ISSN printed on it.

Contact : Ms. Shobhna Vij
e-mail : issn.india@niscair.res.in
phone : 011-26516672

# ಸಂಪಾದಕೀಯ

## ಹೊಸದಾರಿಯಲ್ಲಿ ನಾವು ನೀವು

ಕನ್ನಡದಲ್ಲಿ ಇತಿಹಾಸಕ್ಕೆ ಮೀಸಲಾದ ಅಪರೂಪದ ನಿಯತಕಾಲಿಕೆಗಳಲ್ಲಿ ಒಂದಾದ 'ಇತಿಹಾಸ ದರ್ಪಣ'ವು ಈಗ ಮತ್ತೊಂದು ಮೈಲುಗಲ್ಲನ್ನು ಮುಟ್ಟಿದೆ. ಪ್ರಸ್ತುತ ಐದನೇ ವರ್ಷಕ್ಕೆ ಕಾಲಿರಿಸಿರುವ 'ಇತಿಹಾಸ ದರ್ಪಣ'ಕ್ಕೆ ಇಂದು ISSN (**International Standard Serial Number**) ದೊರೆತಿದೆ. ಇದರಿಂದ ನಮ್ಮ ಜವಾಬ್ದಾರಿ ಕೂಡ ಹೆಚ್ಚಿದ್ದು, ಗುಣಮಟ್ಟಕ್ಕೆ ಹೆಚ್ಚಿನ ಆದ್ಯತೆ ನೀಡುವ ನಿಟ್ಟಿನಲ್ಲಿ ಪೂರ್ವಾವಲೋಕನಗೊಂಡ ಲೇಖನಗಳನ್ನು ಆಯ್ಕೆಮಾಡಿ ಪ್ರಕಟಿಸುವ ಉದ್ದೇಶ ಹೊಂದಿದ್ದೇವೆ. ಇದಕ್ಕೆ ಸೂಕ್ತ ವಿಷಯ ತಜ್ಞರ ನೆರವನ್ನು ಪಡೆಯಲಾಗುವುದು. ಆ ಮೂಲಕ ಪ್ರಮುಖ ಇಂಗ್ಲಿಷ್ ನಿಯತಕಾಲಿಕೆಗಳ ಗುಣಮಟ್ಟಕ್ಕೆ ಸರಿಸಮನಾಗಿ ಕನ್ನಡದಲ್ಲಿಯೂ 'ಇತಿಹಾಸ ದರ್ಪಣ'ವನ್ನು ರೂಪಿಸಬೇಕೆಂಬ ಮಹತ್ವಾಕಾಂಕ್ಷೆ ನಮ್ಮದು. ಈ ಕಾರ್ಯಕ್ಕೆ ನಾಡಿನ ಹಾಗೂ ದೇಶದ ವಿವಿಧ ಭಾಗಗಳಲ್ಲಿ ನೆಲೆಸಿರುವ ಇತಿಹಾಸ ತಜ್ಞರು, ಸಂಶೋಧಕರು, ವಿದ್ವಾಂಸರು, ವಿದ್ಯಾರ್ಥಿಗಳು ಹಾಗೂ ಚರಿತ್ರಾಸಕ್ತರೆಲ್ಲರ ಸಲಹೆ, ಸಹಕಾರಗಳನ್ನು ಕೋರುತ್ತೇವೆ.

ಈ ಸಂಚಿಕೆಯನ್ನು ನಮ್ಮ ಮಹತ್ವಾಕಾಂಕ್ಷೆಯ ಮುನ್ನೋಟಕ್ಕೊಂದು ಮಾದರಿಯಾಗಿ ರೂಪಿಸಲು ಪ್ರಯತ್ನಿಸಿದ್ದೇವೆ. ಇದನ್ನು ಮುಕ್ತ ಮನಸ್ಸಿನಿಂದ ಸ್ವಾಗತಿಸುತ್ತೀರೆಂದುಕೊಂಡಿದ್ದೇವೆ. 'ಕೂಡಿ ಕಲಿಯುವ, ಕೂಡಿ ಬೆಳೆಯುವ' ಆಶಯದೊಂದಿಗೆ ಹೊಸದಾರಿಯಲ್ಲಿ ನಮ್ಮೆಲ್ಲರನ್ನು ಕರೆದೊಯ್ಯುವ ಕೈದೀವಿಗೆ 'ಇತಿಹಾಸ ದರ್ಪಣ'ವಾಗಲೆಂದು ಆಶಿಸುತ್ತೇವೆ.

**–ಹಂ.ಗು. ರಾಜೇಶ್**
ಸಂಪಾದಕರು

# ಬೆಂಗಳೂರು ಪರಿಸರದ ಪ್ರಾಗೈತಿಹಾಸಿಕ ಸಂಸ್ಕೃತಿ : ಒಂದು ಅವಲೋಕನ

–ಎಸ್.ಕೆ. ಅರುಣಿ

**ಬೆಂ**ಗಳೂರು ಪರಿಸರ ಮೂಲತಃ ಅರ್ಕಾವತಿ ಮತ್ತು ದಕ್ಷಿಣ–ಪಿನಾಕಿನಿ ನದಿಗಳ ನಡುವಿನ ಪ್ರಸ್ಥಭೂಮಿ. ಈ ಎರಡೂ ನದಿಗಳ ಕಣಿವೆಗಳು ಪ್ರಾಗೈತಿಹಾಸಿಕ ಕಾಲದಲ್ಲಿ ಮಹತ್ತರ ಪಾತ್ರವಹಿಸಿವೆ. ನದಿ ಆಶ್ರಯಗಳಲ್ಲಿ ಉದಯಗೊಂಡ ಪ್ರಾಚೀನ ಸಂಸ್ಕೃತಿಗಳು ಈ ನಾಡಿನಲ್ಲಿ ಸುಮಾರು ಒಂದು ಲಕ್ಷ ವರ್ಷಗಳ ಹಿಂದೆಯೇ ಮಾನವ ತನ್ನ ಅಸ್ತಿತ್ವ ಪ್ರಾರಂಭಿಸಿದ್ದ ಎಂಬುದು ಇಲ್ಲಿ ನಡೆದ ಸಂಶೋಧನೆಗಳಿಂದ ತಿಳಿದುಬರುತ್ತದೆ. ಇದರಿಂದ ಬೆಂಗಳೂರು ಪರಿಸರ ಕೂಡ ಉಳಿದ ಪ್ರದೇಶಗಳಂತೆ ತನ್ನ ಒಡಲಿನಲ್ಲಿ ಪ್ರಾಗೈತಿಹಾಸಿಕ ಸಂಸ್ಕೃತಿಯನ್ನು ಹುಟ್ಟು ಹಾಕಿತು ಎಂಬುದು ಸ್ಪಷ್ಟವಾಗುತ್ತದೆ. ವನ್ಯ ಪ್ರಾಣಿಗಳನ್ನು ಬೇಟೆಯಾಡಿಕೊಂಡು ತನ್ನ ಜೀವನ ಕ್ರಮ ಪ್ರಾರಂಭಿಸಿದ ಹಳೆಯ ಶಿಲಾಯುಗದ ಆದಿಮಾನವನಿಂದ ಪ್ರಾರಂಭ ಗೊಂಡು ಕಬ್ಬಿಣ ಲೋಹದ ಆವಿಷ್ಕಾರ ಕಂಡುಕೊಂಡು ಕೃಷಿ ಮತ್ತು ವ್ಯಾಪಾರಗಳನ್ನು ಅಳವಡಿಸಿಕೊಂಡು ಒಂದು ಸಾಂಸ್ಕೃತಿಕ ಬದುಕನ್ನು ನಿರ್ಮಿಸಿಕೊಂಡ ಚರಿತ್ರೆಯನ್ನು ಈ ಪರಿಸರದಲ್ಲಿ ನಾವು ಗುರುತಿಸಬಹುದು. ಪ್ರಾಚೀನ ಕಾಲದ ರೋಮನ್ನರ ನಾಣ್ಯಗಳು ಬೆಂಗಳೂರು ಪರಿಸರದ ಕೆಲವು ಪ್ರದೇಶದಲ್ಲಿ ದೊರೆತ ಮಾಹಿತಿಗಳಿವೆ. ರೋಮನ್ ಸಾಮ್ರಾಜ್ಯದೊಂದಿಗೆ ಬೆಂಗಳೂರು ಪರಿಸರವು ಹೊಂದಿದ್ದ ರಾಜಕೀಯ ಅಥವಾ ಸಾಂಸ್ಕೃತಿಕ ಶಕ್ತಿಗಳಾವುವು? ಇತ್ಯಾದಿ ಪ್ರಶ್ನೆಗಳಿಗೆ ಸೂಕ್ತ ಉತ್ತರಗಳನ್ನು ಹುಡುಕುವ ಪ್ರಯತ್ನ ಇಲ್ಲಿದೆ.

**ಪ್ರಾಗೈತಿಹಾಸಿಕ ಅವಶೇಷಗಳ ಶೋಧನೆಗಳು**

ಬೆಂಗಳೂರು ಪರಿಸರದಲ್ಲಿ ಪ್ರಾಚೀನ ಆದಿಮಾನವನ ಅವಶೇಷಗಳ ಶೋಧನೆಗೆ ಸಾಕಷ್ಟು ವಿದ್ವಾಂಸರು ಶ್ರಮಿಸಿದ್ದಾರೆ. ಸುಮಾರು ೧೮೩೦ರ ದಶಕದಿಂದ ಪ್ರಾರಂಭಗೊಂಡು ತೀರ ಇತ್ತೀಚಿನವರೆಗೂ ನಿರಂತರವಾಗಿ ಈ ಪರಿಸರದ ಪ್ರಾಗೈತಿಹಾಸಿಕ ಶೋಧನೆಗಳನ್ನು ಸಂಶೋಧಕರು ನಡೆಸಿರುವುದನ್ನು ಗುರುತಿಸಬಹುದು. ಟಿಪ್ಪು ಸುಲ್ತಾನನನ್ನು ಸೋಲಿಸಿ ಬ್ರಿಟಿಷರು ತಮ್ಮ ಅಧಿಪತ್ಯವನ್ನು ಸ್ಥಾಪಿಸಿದ ತಕ್ಷಣವೇ ಬೆಂಗಳೂರು ಒಳಗೊಂಡಂತೆ ಮೈಸೂರು ರಾಜ್ಯದ ಭೌಗೋಳಿಕ ಹಾಗೂ ಐತಿಹಾಸಿಕ ಮಾಹಿತಿ ಸಂಗ್ರಹಿಸುವ ಕಾರ್ಯದ ಹಿನ್ನೆಲೆಯಲ್ಲಿ ರೂಪುಗೊಂಡ ಕರ್ನಲ್ ಮಾರ್ಕ್ ವಿಲ್ಕ್ಸ್ (Wilks 1810) ರಚಿಸಿದ *Historical Sketches of the South India- in an Attempt to Trace the History of Mysore from the Origin of the Hindoo Government of that State to the Extinction of the Mohammedan Dynasty in 1799'* ಮತ್ತು ಪ್ರಸಿದ್ಧ ಸಸ್ಯಶಾಸ್ತ್ರಜ್ಞ ಫ್ರಾನ್ಸಿಸ್ ಬುಕಾನನ್ ರಚಿಸಿದ ಸಂಪುಟಗಳ ಬೃಹತ್ ವರದಿಗಳಾದ *A Journey from Madras Through the Countries of Mysore, Canara and Malbar (Buchanan 1807)* ಈ ನಾಡಿನ ಐತಿಹಾಸಿಕ ಮಾಹಿತಿ ಸಂಗ್ರಹದ ಗ್ರಂಥಗಳು. ಬ್ರಿಟಿಷರು ಬೆಂಗಳೂರನ್ನು ೧೭೯೧ರಲ್ಲಿ ವಶಪಡಿಸಿಕೊಂಡ ಸಂದರ್ಭದಲ್ಲಿ ಅನೇಕ ಐರೋಪ್ಯ ಕಲಾವಿದರು ಬೆಂಗಳೂರು ಸುತ್ತಮುತ್ತಲಿನ ಐತಿಹಾಸಿಕ ಸ್ಮಾರಕಗಳ ರೇಖಾಚಿತ್ರಗಳನ್ನು ರಚಿಸಿರುವುದನ್ನು ಕಾಣುತ್ತೇವೆ (ನೋಡಿ– Home 1794). ಆದರೆ ಇವರೆಲ್ಲ ರಚಿಸಿದ ಕಲಾಕೃತಿಗಳು ಟಿಪ್ಪು ಸುಲ್ತಾನನ ಆಧೀನದಲ್ಲಿದ್ದ ಸ್ಥಳಗಳ ಚಿತ್ರಗಳಾಗಿದ್ದು ಪ್ರಾಗೈತಿಹಾಸಿಕ ಅವಶೇಷಗಳ ಮಾಹಿತಿಯನ್ನು ನೀಡುವ ಕೃತಿಗಳಾಗಿಲ್ಲ. ಅದರಂತೆ ೧೮೦೦ರ ಸುಮಾರಿಗೆ ಹೆಸರಾಂತ ವಿದ್ವಾಂಸ ಕಾಲಿನ್ ಮೆಕೆಂಜಿ ಮೈಸೂರು ರಾಜ್ಯ ಸೇರಿದಂತೆ ಸಮಗ್ರ ಭಾರತದ ಭೂ–ಸರ್ವೇ ಕಾರ್ಯ ನಿರ್ವಹಿಸಲು ಪ್ರಾರಂಭಿಸಿದ. ಅದರ ಜೊತೆಗೆ ನಾಡಿನಾದ್ಯಂತ ಚರಿತ್ರೆಯ ದಾಖಲೆಗಳನ್ನು ಸಂಗ್ರಹಿಸುವ ಕಾರ್ಯವನ್ನೂ ಮಾಡಿದ. ಈ ಮಹತ್ವದ ಕಾರ್ಯದಲ್ಲಿಯೂ ಮೆಕೆಂಜಿ ಅವರಿಂದ ಬೆಂಗಳೂರು ಪರಿಸರದ ಪ್ರಾಗೈತಿಹಾಸಿಕ ಅವಶೇಷಗಳು ಶೋಧಿಸಿದ ವರದಿಗಳು ಇಲ್ಲ. ಬೆಂಗಳೂರು ಪರಿಸರ ಕುರಿತಾದ ಭೌಗೋಳಿಕ ಮಾಹಿತಿ ಒಳಗೊಂಡ ಲೇಖನ ಪ್ರಥಮ ಬಾರಿಗೆ ಪ್ರಕಟಗೊಂಡಿದ್ದು ಕ್ರಿ.ಶ. ೧೮೩೯ರ ಅವಧಿಯಲ್ಲಿ. ಜಾನ್ ಕ್ಲಾರ್ಕ್ ಎಂಬ ಐರೊಪ್ಯ ವಿದ್ವಾಂಸ 'Geology of Bangalore and Some Portions of Mysore' ಎಂಬ ಲೇಖನವನ್ನು ಮದ್ರಾಸ್‌ನಿಂದ ಪ್ರಕಟಗೊಳ್ಳುತ್ತಿದ್ದ ವಿದ್ವತ್ ಪತ್ರಿಕೆಯಲ್ಲಿ ಪ್ರಕಟಿಸಿದರು (ನೋಡಿ– Clark 1839). ಈ ಲೇಖನವು ಬೆಂಗಳೂರು ಸುತ್ತಮುತ್ತಲಿನ ಪ್ರದೇಶದ ಪ್ರಾಗೈತಿಹಾಸಿಕ ವಿಷಯಗಳಿಗೆ ಸಂಬಂಧಿಸಿದ ಪೂರಕವಾದ ಮಾಹಿತಿಗಳನ್ನು ಒಳಗೊಂಡಿದೆ. ಮುಂದಿನ ಮೂವತ್ತೈದು ವರ್ಷಗಳ ಕಾಲ ಅಂದರೆ ೧೮೭೩ರವರೆಗೆ ಬೆಂಗಳೂರು ಪರಿಸರದಲ್ಲಿ ಪ್ರಾಗೈತಿಹಾಸಿಕ ಶೋಧನೆ ಕೈಗೊಂಡಿರುವ ಮಾಹಿತಿಗಳಿಲ್ಲ. ಬ್ರಿಟಿಷ್ ಅಧಿಕಾರಿಯಾಗಿದ್ದ ರಾಬರ್ಟ್ ಕೋಲ್ ಎಂಬುವರು ಕೊಡಗು ಪ್ರದೇಶದ ಮೊರಿಬೆಟ್ಟ, ಚಿಕ್ಕಬಳ್ಳಾಪುರದ ಬಳಿಯ ಗುಡಿಬಂಡೆಯ ಹತ್ತಿರ ಕಬ್ಬಿಣ ಯುಗದ ಅನೇಕ ಶಿಲಾಸಮಾಧಿಗಳನ್ನು ಶೋಧಿಸಿ ಪ್ರಕಟಿಸಿದರು. ಇವರು ಇಂಡಿಯನ್ ಆ್ಯಂಟಿಕ್ವೆರಿ ನಿಯತಕಾಲಿಕದ ೨ನೇ ಸಂಪುಟದಲ್ಲಿ ಒಂದು ಚಿಕ್ಕ ಲೇಖನವನ್ನು ಪ್ರಕಟಿಸಿದ್ದಾರೆ

(Cole 1873). ಇದರಲ್ಲಿ ಗುಡಿಬಂಡೆ ಹಾಗೂ ಕೊಡಗು ಪ್ರದೇಶಗಳಲ್ಲಿ ಶಿಲಾಸಮಾಧಿಗಳ ಇರುವಿಕೆಯನ್ನು ವಿವರಿಸುತ್ತಾ, ಬೆಂಗಳೂರು ಪರಿಸರದ ಚಿಕ್ಕಜಾಲದ ಬೆಟ್ಟದ ಬಂಡೆಯಲ್ಲಿರುವ ಕಬ್ಬಿಣಯುಗದ ಶಿಲಾಸಮಾಧಿಗಳ ಮಾಹಿತಿಯನ್ನು ನೀಡುತ್ತಾರೆ. ಈ ಮಾಹಿತಿ ಬೆಂಗಳೂರು ಪರಿಸರದ ಪ್ರಾಗೈತಿಹಾಸಿಕ ಅವಶೇಷಗಳನ್ನು ದಾಖಲಿಸುವ ಪ್ರಥಮ ಪ್ರಕಟಣೆಯಾಗಿದೆ. ೧೮೮೦ರ ದಶಕ ಪ್ರಾರಂಭವಾಗುತ್ತಿದ್ದಂತೆಯೇ, ದಕ್ಷಿಣ ಭಾರತದಾದ್ಯಂತ ಪೂರ್ಣಪ್ರಮಾಣದ ಪುರಾತತ್ತ್ವ ಅಧ್ಯಯನಗಳು ನಡೆಯುತ್ತಿದ್ದವು. ಬಿ.ಎಲ್.ರೈಸ್ ಮತ್ತು ಜಾನ್ ಫ್ಲೀಟ್‌ರಂತಹ ಮೇಧಾವಿ ಶಾಸನ ತಜ್ಞರು ಶಾಸನಗಳ ಸಂಗ್ರಹಕಾರ್ಯದಲ್ಲಿ ತೊಡಗಿದ್ದರು. ಇದೇ ವೇಳೆಯಲ್ಲಿ ಭಾರತೀಯ ಸರ್ವೇಕ್ಷಣಾ ಇಲಾಖೆಯ ಉಪ-ಅಧೀಕ್ಷಕರಾಗಿದ್ದ ಬಿ.ಆರ್. ಬ್ರಾನ್ ಫಿಲ್ ಅವರು ೧೮೮೧ರ ಅವಧಿಯಲ್ಲಿ ಸಾವನದುರ್ಗದ ಬಳಿಯ ಇಟ್ಟಿಗೆಬೈಲು ಪ್ರದೇಶದಲ್ಲಿ ಕಬ್ಬಿಣಯುಗಕ್ಕೆ ಸೇರಿದ ಶಿಲಾಸಮಾಧಿಗಳಿರುವ ಮಾಹಿತಿಯನ್ನು ಆಧರಿಸಿ ಅವುಗಳ ಅಧ್ಯಯನಕ್ಕಾಗಿ ಉತ್ಖನನಗಳನ್ನು ಕೈಗೊಳ್ಳುತ್ತಾರೆ. ಬೆಂಗಳೂರು ಪರಿಸರದಲ್ಲಿಯೇ ಪ್ರಥಮ ಬಾರಿಗೆ ಪ್ರಾಗೈತಿಹಾಸಿಕ ನೆಲೆಯ ಅಧ್ಯಯನಕ್ಕಾಗಿ ಕೈಗೊಂಡ ಉತ್ಖನನ ಇದಾಗಿದೆ. ಈ ಉತ್ಖನನದ ವರದಿಯನ್ನು ಬ್ರಾನ್ ಫಿಲ್ ಅವರು ೧೮೮೧ರಲ್ಲಿ ಇಂಡಿಯನ್ ಆಂಟಿಕ್ವೆರಿ ನಿಯತಕಾಲಿಕದ ೧೦ನೇ ಸಂಪುಟದಲ್ಲಿ ಪ್ರಕಟಿಸಿದರು (Branfill 1881). ಹಲವಾರು ರೇಖಾಚಿತ್ರಗಳೊಂದಿಗೆ ಪ್ರಕಟಿಸಿದ ಈ ಲೇಖನ ಬೆಂಗಳೂರು ಪರಿಸರದ ಕಬ್ಬಿಣಯುಗ ಮತ್ತು ಇತಿಹಾಸ ಆರಂಭಿಕ ಕಾಲದ [Early Historic period] ಚರಿತ್ರೆಯ ರಚನೆಗೆ ಮಹತ್ವದ ಅವಶೇಷಗಳ ವಿವರಗಳನ್ನು ನೀಡುತ್ತದೆ.

ಮೈಸೂರು ರಾಜ್ಯದಲ್ಲಿ ಪುರಾತತ್ತ್ವ ಇಲಾಖೆಯು ೧೮೮೫ ರಲ್ಲಿ ಬಿ.ಎಲ್. ರೈಸ್ ಅವರ ಮಾರ್ಗದರ್ಶನದಲ್ಲಿ ಅಸ್ತಿತ್ವಕ್ಕೆ ಬಂದಿತು. ತನ್ನ ಸ್ಥಾಪನೆಯ ೨೫ ವರ್ಷ ಸಂದಿದ್ದರೂ ಇಲಾಖೆಯು ಬೆಂಗಳೂರು ಪರಿಸರದಲ್ಲಿ ಪ್ರಾಗೈತಿಹಾಸಿಕ ಅಥವಾ ಚರಿತ್ರೆ ಆರಂಭಿಕ ಕಾಲದ ಅವಶೇಷಗಳ ಶೋಧನೆಗೆ ಹೆಚ್ಚಿನ ಮಹತ್ವ ನೀಡಿದಂತಿಲ್ಲ. ರೈಸ್ ಅವರು ಪ್ರಾಚೀನ ಶಿಲಾಶಾಸನಗಳು ಹಾಗೂ ದೇವಾಲಯಗಳ ಕುರಿತಾದ ಶೋಧನೆ, ದಾಖಲೀಕರಣ ಹಾಗೂ ಪ್ರಕಟಣೆಗೆ ಹೆಚ್ಚು ಒತ್ತು ನೀಡಿದ್ದರು. ಕ್ರಿ.ಶ. ೧೮೯೧ರ ಅವಧಿಯಲ್ಲಿ ಬೆಂಗಳೂರು ನಗರದಿಂದ ತುಮಕೂರು ಮಾರ್ಗವಾಗಿ ಮೀರಜ್ ಕೊಲ್ಹಾಪುರ ನಗರಗಳಿಗೆ ಸಂಪರ್ಕ ಕಲ್ಪಿಸುವ ಸದರ್ನ್ ಮರಾಠ ರೈಲ್ವೆ ಮಾರ್ಗದ ಕಾಮಗಾರಿ ಕೆಲಸ ಪ್ರಾರಂಭವಾಗಿತ್ತು. ಈ ವೇಳೆ ಬೆಂಗಳೂರು ಮತ್ತು ಯಶವಂತಪುರ ಪ್ರದೇಶಗಳ ಮಾರ್ಗ ಮಧ್ಯದಲ್ಲಿ ಪ್ರಾಚೀನ ಕಾಲದ ರೋಮನ್ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಹಳೆಯ ನಾಣ್ಯಗಳಿರುವ ಒಂದು ಕುಡಿಕೆ ಪತ್ತೆಯಾಯಿತು. ಶೋಧಿತ ಈ ನಾಣ್ಯಗಳ ಕುರಿತಾಗಿ ಇಲಾಖೆಯ ಮುಖ್ಯಸ್ಥರಾಗಿದ್ದ ಬಿ.ಎಲ್. ರೈಸ್ ಅವರು ಹೆಚ್ಚಿನ ಆಸಕ್ತಿಯಿಂದ ಅಧ್ಯಯನ ಕೈಗೊಂಡು ಒಂದು ಕೃತಿಯನ್ನು ಪ್ರಕಟಿಸಿದರು (Rice 1891). ಈ ಕೃತಿ ಲಭ್ಯವಿಲ್ಲ. ಆದರೆ, ಈ ವರದಿಯನ್ನು ಆಧರಿಸಿ ಅದೇ ಕಾಲದ ವಿಜ್ಞಾನ ದೀಪಿಕೆ ಪತ್ರಿಕೆಯು ಕನ್ನಡದಲ್ಲಿ ವರದಿ ಮಾಡಿದೆ. ಈ ವರದಿಯ ಪೂರ್ಣ ಪಾಠವನ್ನು ಸಂಶೋಧಕರಾದ ಎಸ್.ಎಲ್. ಶ್ರೀನಿವಾಸ ಮೂರ್ತಿ ಅವರು ತಮ್ಮ ಇತ್ತೀಚಿನ ಕೃತಿಯಲ್ಲಿ ಪ್ರಕಟಿಸಿದ್ದಾರೆ (ಶ್ರೀನಿವಾಸ ಮೂರ್ತಿ ೨೦೧೧).

೧೮೬೭ರಲ್ಲಿ ಬೆಂಗಳೂರಿನ ರೇಸ್‌ಕೋರ್ಸ್ ಆವರಣದಲ್ಲಿ ಐರೋಪ್ಯ ಅಧಿಕಾರಿಯಾದ ಕಿಸಿಯಡ್ ಲೀ ಎಂಬವರು ಸೂಕ್ಷ್ಮಶಿಲಾಯುಗಕ್ಕೆ ಸೇರಿದ ಕೆಲವು ಶಿಲಾಯುಧಗಳನ್ನು ಶೋಧಿಸಿದರು. ಇಲ್ಲಿ ದೊರೆತ ಶಿಲಾಯುಧಗಳನ್ನು ನಂತರ ಕಾಲದಲ್ಲಿ ಪುರಾತತ್ವ ಇಲಾಖೆಯ ಮುಖ್ಯಸ್ಥರಾದ ಎಂ. ಶೇಷಾದ್ರಿ ಅವರು ಹೆಚ್ಚಿನ ಅಧ್ಯಯನ ಕೈಗೊಂಡು ತಮ್ಮದೇ ಆದ ವಿಶ್ಲೇಷಣೆ ಮಾಡಿದ್ದಾರೆ (Seshadri 1956:29).

೧೯೦೯ರಲ್ಲಿ ಮಿಥಿಕ್ ಸೊಸೈಟಿ ಸ್ಥಾಪನೆಯೊಂದಿಗೆ ಬೆಂಗಳೂರು ಪರಿಸರದ ಪುರಾತತ್ವ ಅಧ್ಯಯನಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಿತು. ಐರೋಪ್ಯರು ಹಾಗೂ ಭಾರತೀಯರು ಇಬ್ಬರು ಒಟ್ಟಿಗೆ ಅಧ್ಯಯನಗಳನ್ನು ಕೈಗೊಳ್ಳುವ ಉದ್ದೇಶದಿಂದ ಈ ಸಂಸ್ಥೆ ಪ್ರಾರಂಭವಾಯಿತು. ೧೯೦೯ರಲ್ಲಿ ಬನ್ನೇರುಘಟ್ಟ ಪರಿಸರದ ಭೂತನಹಳ್ಳಿ ಗ್ರಾಮದ ಬಳಿಯಲ್ಲಿ ಪ್ರಾಗೈತಿಹಾಸಿಕ ಕಾಲದ ಹಲವಾರು ಬೃಹತ್ ಶಿಲಾಗೋರಿಗಳನ್ನು ಸಿ.ಡಿ. ಗ್ರೇಸನ್ ಅವರು ಶೋಧಿಸಿ ಮಿಥಿಕ್ ಸೊಸೈಟಿಯ ನಿಯತಕಾಲಿಕವಾದ ಕ್ವಾಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ ಸಂಪುಟ-೧ ರಲ್ಲಿ ಪ್ರಕಟಿಸಿದರು (Greson 1909-10:152-153). ಮೂಲತಃ ಬನ್ನೇರುಘಟ್ಟ ಪರಿಸರದಲ್ಲಿ ಕಂಡುಬರುವ ಅಸಂಖ್ಯ ಶಿಲಾಗೋರಿಗಳ ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ಒದಗಿಸುವ ಈ ಲೇಖನವು ಮುಂದಿನ ದಿನಗಳಲ್ಲಿ ಹಲವು ವಿದ್ವಾಂಸರು ಈ ಪರಿಸರದಲ್ಲಿ ಬೃಹತ್ ಶಿಲಾಗೋರಿ ಸಂಸ್ಕೃತಿಯ ಕುರಿತು ಅಧ್ಯಯನ ನಡೆಸಲು ಪ್ರೇರಣೆ ನೀಡಿತು.

೧೯೧೦ರ ವೇಳೆಗೆ ಮೈಸೂರು ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿ ಆರ್. ನರಸಿಂಹಾಚಾರ್ ಅವರು ನೇಮಕಗೊಂಡರು. ಅವರು ತಮ್ಮ ಅವಧಿಯಲ್ಲಿ ಪುರಾತತ್ವ ಅಧ್ಯಯನಕ್ಕೆ ಒಂದು ಹೊಸತನ ತಂದುಕೊಟ್ಟರು. ಇದೆ ವೇಳೆಗೆ ರಾಷ್ಟ್ರಮಟ್ಟದಲ್ಲಿ ಭಾರತೀಯ ಪುರಾತತ್ವ ಇಲಾಖೆಯು ಕೂಡ ಸ್ಥಾಪನೆಗೊಂಡಿತು. ಇದರಿಂದ ದಕ್ಷಿಣ ಭಾರತ ಒಳಗೊಂಡಂತೆ ವಿವಿಧ ಭಾಗಗಳಲ್ಲಿ ಪ್ರಾದೇಶಿಕ ಕೇಂದ್ರಗಳ ಮೂಲಕ ಸಂಘಟಿತ ಅನ್ವೇಷಣೆ ಹಾಗೂ ಉತ್ಖನನಗಳು ನಡೆಯತೊಡಗಿದವು. ಬೆಂಗಳೂರು ಪರಿಸರದಲ್ಲಿಯೂ ನರಸಿಂಹಾಚಾರ್ ಅವರ ಕಾಲದಲ್ಲಿ ಎರಡು ಪ್ರಮುಖವಾದ ಪ್ರಾಚೀನ ನೆಲೆಗಳ ಶೋಧನೆ ಹಾಗೂ ಅವುಗಳ ಉತ್ಖನನಗಳು ನಡೆದವು. ೧೯೧೫ರ ಅವಧಿಯಲ್ಲಿ ಬೆಂಗಳೂರಿನ ನೈರುತ್ಯಕ್ಕೆ ಇರುವ ಜೆಳ್ಳಂದೂರು ಗ್ರಾಮದ ಕೆರೆಯ ದಂಡೆಯ ಬಳಿಯಲ್ಲಿ ಐರೋಪ್ಯರಾದ ಬುಷ್ ಎಂಬವರು ತಮ್ಮ ಎಸ್ಟೇಟ್ ಆವರಣದಲ್ಲಿ ಪ್ರಾಗೈತಿಹಾಸಿಕ ಕಾಲದ ಬೃಹತ್ ಶಿಲಾಗೋರಿಗಳನ್ನು ಶೋಧಿಸಿ, ಕುತೂಹಲದಿಂದ ಅವುಗಳನ್ನು ಪರಿಶೀಲಿಸಿದರು. ಆನಂತರ ಕೆಲವು ಪ್ರಾಚೀನ ಮಡಕೆಗಳನ್ನು ಸಂಗ್ರಹಿಸಿ ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿದ್ದ ಆರ್. ನರಸಿಂಹಾಚಾರ್ ಅವರ ಕಛೇರಿಗೆ ತಂದು ತೋರಿಸಿದರು (*MAR* 1915:17). ಇವುಗಳ ಮಾಹಿತಿಗಳನ್ನು ಆಧರಿಸಿ ೧೯೧೬ರಲ್ಲಿ ನರಸಿಂಹಾಚಾರ್ ಅವರು ಜೆಳ್ಳಂದೂರಿನಲ್ಲಿ ಪೂರ್ಣಪ್ರಮಾಣದ ಉತ್ಖನನಗಳನ್ನು ಕೈಗೊಂಡು ಪ್ರಾಗೈತಿಹಾಸಿಕ ಕಾಲದ ಶಿಲಾಗೋರಿಯ ನಿರ್ಮಾಣದ ವಿಧಾನ ಮತ್ತು ಅವುಗಳಲ್ಲಿ ದೊರೆತ ವಿವಿಧ ಮಡಕೆಗಳು ಹಾಗೂ ಇತರ ಅವಶೇಷಗಳ ಕುರಿತಾದ ಒಂದು ಚಿಕ್ಕ ಟಿಪ್ಪಣಿಯನ್ನು ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದರು (*MAR* 1916:26).

೧೯೧೭ರಲ್ಲಿ ದೇವನಹಳ್ಳಿ ತಾಲೂಕಿನ ಮನಗೊಂಡನಹಳ್ಳಿ ಬಳಿಯ ಬೃಹತ್ ಶಿಲಾಗೋರಿಗಳನ್ನು ಕುರಿತು ಅಧ್ಯಯನ ಹಾಗೂ ಸಣ್ಣ ಪ್ರಮಾಣದ ಉತ್ಖನನಗಳನ್ನು ಇಲಾಖೆಯ ವತಿಯಿಂದ ಆರ್. ನರಸಿಂಹಾಚಾರ್ ಅವರು ಕೈಗೊಂಡರು. ಬೆಳ್ಳಂದೂರು ಉತ್ಖನನಗಳಿಗಿಂತಲೂ ಹೆಚ್ಚು ವೈಜ್ಞಾನಿಕ ಹಾಗೂ ಅವಶೇಷಗಳ ಪೂರ್ಣ ಮಾಹಿತಿ ಒದಗಿಸುವ ವಿಧಾನಗಳಲ್ಲಿನ ಸುಧಾರಣೆಗಳನ್ನು ಇಲಾಖೆಯ ವಾರ್ಷಿಕ ವರದಿಗಳಲ್ಲಿ ಕಾಣಬಹುದು. ಮಡಕೆಗಳ ಛಾಯಾಚಿತ್ರ ಸಹಿತ ಪ್ರಕಟಗೊಂಡ ಉತ್ಖನನದ ವರದಿಯಲ್ಲಿ ನರಸಿಂಹಾಚಾರ್ ಅವರು ಇಲ್ಲಿಯ ಅವಶೇಷಗಳ ಮಹತ್ವ ವಿವರಿಸಿದ್ದಾರೆ (*MAR* 1917:62).

ಆರ್. ನರಸಿಂಹಾಚಾರ್ ಅಧಿಕಾರಾವಧಿಯ ನಂತರ ಮೈಸೂರು ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿ ಎಂ.ಹೆಚ್. ಕೃಷ್ಣ ಅವರು ನೇಮಕಗೊಂಡರು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪುರಾತತ್ವ ವಿಷಯದಲ್ಲಿ ಸಂಶೋಧನೆ ನಡೆಸಿದ್ದ ಎಂ.ಹೆಚ್. ಕೃಷ್ಣ ಅವರು ಮೈಸೂರು ರಾಜ್ಯದ ಪುರಾತತ್ವ ಅಧ್ಯಯನ ಮತ್ತು ಸಂಶೋಧನಾ ಕ್ಷೇತ್ರಕ್ಕೆ ಹೊಸ ಆಲೋಚನೆ ಮತ್ತು ದೃಷ್ಟಿಕೋನವನ್ನು ನೀಡಿದರು. ೧೯೨೯ ರಿಂದ ೧೯೪೭ ರವರೆಗೆ ಸುದೀರ್ಘ ಕಾಲ ಇಲಾಖೆಯ ಮುಖ್ಯಸ್ಥರಾಗಿ ಇಲಾಖೆಯನ್ನು ಸದೃಢವಾಗಿ ಕಟ್ಟಿಬೆಳೆಸಿದರು. ಅವರು ಚಂದ್ರವಳ್ಳಿ ಹಾಗೂ ಬ್ರಹ್ಮಗಿರಿಗಳೆರಡರಲ್ಲಿಯೂ ದೊಡ್ಡ ಪ್ರಮಾಣದ ಉತ್ಖನನಗಳನ್ನು ನಡೆಸಿ ದಕ್ಷಿಣ ಭಾರತದ ಪ್ರಾಗೈತಿಹಾಸಿಕ ಹಾಗೂ ಚರಿತ್ರೆ ಆರಂಭ ಕಾಲದ ಸಂಸ್ಕೃತಿಯ ಅಧ್ಯಯನಗಳಿಗೆ ಮಹತ್ವದ ಆಕರಗಳನ್ನು ಒದಗಿಸಿದರು. ಬೆಂಗಳೂರು ಪರಿಸರದ ಪ್ರಾಗೈತಿಹಾಸಿಕ ಅಧ್ಯಯನಕ್ಕೆ ಕೃಷ್ಣ ಅವರ ಕೊಡುಗೆಯನ್ನು ವಿಶ್ಲೇಷಿಸುವುದಾದರೆ ಅವರ ಸುದೀರ್ಘ ಕಾಲಾವಧಿಯಲ್ಲಿ ಹೆಚ್ಚಿನ ಅನ್ವೇಷಣೆ ಅಥವಾ ಉತ್ಖನನಗಳನ್ನು ಈ ಪರಿಸರದಲ್ಲಿ ಕೈಗೊಳ್ಳಲಾಗಿಲ್ಲವೆಂದೇ ಹೇಳಬಹುದು. ಪ್ರಾಯಶಃ ಪುರಾತತ್ವ ಇಲಾಖೆಯು ಬೆಂಗಳೂರಿನಿಂದ ಮೈಸೂರಿಗೆ ವರ್ಗಾಯಿಸಿದ್ದರಿಂದ ಹಾಗೂ ಅವರು ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿನ ಮೌರ್ಯರ ಕಾಲದ ಅವಶೇಷಗಳಿಗೆ ಹೆಚ್ಚಿನ ಆದ್ಯತೆ ನೀಡಿದ್ದರಿಂದ ಬೆಂಗಳೂರು ಪರಿಸರದ ಪುರಾತತ್ವ ಅಧ್ಯಯನ ಮಹತ್ವ ಪಡೆಯಲಿಲ್ಲವೆಂದೇ ಗ್ರಹಿಸಬಹುದಾಗಿದೆ. ಆದರೆ ೧೯೪೬ರ ಅವಧಿಯಲ್ಲಿ ದೇವನಹಳ್ಳಿ ತಾಲ್ಲೂಕಿನ ತರಬನಹಳ್ಳಿ ಗ್ರಾಮದ ಬಳಿಯಲ್ಲಿ ಚರಿತ್ರೆ ಆರಂಭ ಕಾಲದ ಮಹತ್ವದ ಅವಶೇಷಗಳನ್ನು ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯ ಇಲಾಖೆಯ ಸಹಯೋಗದೊಂದಿಗೆ ಶೋಧಿಸಿ, ಅಲ್ಲಿಯ ಅವಶೇಷಗಳನ್ನು ಚಂದ್ರವಳ್ಳಿಯ ಅವಶೇಷಗಳೊಂದಿಗೆ ತಾಳೆಹಾಕಿ ಅವುಗಳ ಮಹತ್ವವನ್ನು ವಿವರಿಸಿದ್ದಾರೆ (*MAR* 1946:10). ಇದಕ್ಕೆ ಮುನ್ನ ತರಬನಹಳ್ಳಿಯ ಅವಶೇಷಗಳ ಮಾಹಿತಿಯನ್ನು ೧೯೪೩ರಲ್ಲಿ ಬ್ರಿಟಿಷ್ ಸೇನಾಧಿಕಾರಿಯಾದ ಎಡ್ವರ್ಡ್ ಎಲ್ಮ್‌ಹರ್ಸ್ಟ್ ಎಂಬವರು ಇಲಾಖೆಯ ಮುಖ್ಯಸ್ಥರಾಗಿದ್ದ ಎಂ.ಹೆಚ್. ಕೃಷ್ಣ ಅವರ ಗಮನಕ್ಕೆ ತಂದಿದ್ದರು. ಈ ಮಾಹಿತಿಯನ್ನು ಆಧರಿಸಿ ೧೯೪೬ರಲ್ಲಿ ತರಬನಹಳ್ಳಿಯಲ್ಲಿ ಅನ್ವೇಷಣೆ ಕೈಗೊಂಡು ಒಂದು ಚಿಕ್ಕ ಟಿಪ್ಪಣಿಯನ್ನು ವಾರ್ಷಿಕ ವರದಿಯಲ್ಲಿ ಪ್ರಕಟಿಸಿದರು (*MAR* 1946:10).

೧೯೩೨ರ ಅವಧಿಯಲ್ಲಿ ಬೆಂಗಳೂರಿನ ಲಾಲ್‌ಬಾಗ್ ಆವರಣಕ್ಕೆ ಹೊಂದಿಕೊಂಡಂತಿರುವ ಬಯಲಿನಲ್ಲಿ ಶೋಧಿಸಲಾದ ಬೃಹತ್ ಶಿಲಾಸಂಸ್ಕೃತಿಯ ಗೋರಿಗಳನ್ನು ಕುರಿತಾದ ಮಾಹಿತಿಯನ್ನು ಎಂ.ಹೆಚ್. ಕೃಷ್ಣ ಅವರು ವಾರ್ಷಿಕ ವರದಿಯಲ್ಲಿ

ಪ್ರಕಟಿಸಿದರು (*MAR* 1932:1). ಬೆಂಗಳೂರಿನ ಕೇಂದ್ರಭಾಗವಾದ ಲಾಲ್‌ಬಾಗ್‌ನಲ್ಲಿ ದೊರೆ ಈ ಬೃಹತ್ ಶಿಲಾಸಂಸ್ಕೃತಿಯ ಗೋರಿಗಳು ಬೆಂಗಳೂರಿನ ಚರಿತ್ರೆಗೆ ಬಹಳ ಮಹತ್ವ ಶೋಧನೆಗಳಾಗಿವೆ. ಆದರೆ ಇಲ್ಲಿ ದೊರೆತ ಪ್ರಾಚೀನ ಸಮಾಧಿಗಳಲ್ಲಿನ ಮಡಕೆ ಅಥವಾ ಅವಶೇಷಗಳ ಕುರಿತಾದ ಹೆಚ್ಚಿನ ಮಾಹಿತಿಗಳು ಪ್ರಕಟಗೊಳ್ಳಲಿಲ್ಲ. ಆದರೆ ೧೯೩೨ರಲ್ಲಿಯ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ನಡೆದ ಭಾರತೀಯ ವಿಜ್ಞಾನ ಸಮ್ಮೇಳನದಲ್ಲಿ ಲಾಲ್‌ಬಾಗ್‌ನಲ್ಲಿ ದೊರೆತ ಅವಶೇಷಗಳ ಪ್ರದರ್ಶನ ಮಾಡಲಾಗಿತ್ತೆಂಬ ಮಾಹಿತಿ ನಮಗೆ ದೊರೆಯುತ್ತದೆ. ಈ ಪ್ರದರ್ಶನದಲ್ಲಿಯ ಕೆಂಪು ವರ್ಣದ ಮಡಕೆಗಳನ್ನು ಗಮನಿಸಿದ ವಿದ್ವಾಂಸ ಎಸ್. ಶ್ರೀಕಂಠಯ್ಯ ಅವರು ಪಾಂಡಿಚೆರಿ ಬಳಿಯ ಅರಿಕಮೇಡು ನೆಲೆಯಲ್ಲಿ ಇದೇ ಮಾದರಿಯ ಮಡಕೆಗಳು ದೊರೆತಿವೆ ಎಂದು ಪ್ರಕಟಿಸಿದ್ದಾರೆ (Srikantaiah 1939-40 : 363). ಹೆಸರಾಂತ ಪುರಾತತ್ವಜ್ಞ ಮಾರ್ಟಿಮರ್ ವೀಲ್ಹರ್ ಅವರು ಅರಿಕಮೇಡು ನೆಲೆಯಲ್ಲಿ ಉತ್ಖನನ ಕೈಗೊಳ್ಳುವ ಮುಂಚೆಯೇ ಶೋಧನೆ ನಡೆಸಿದ ವಿದ್ವಾಂಸ ಶ್ರೀಕಂಠಯ್ಯ ಅವರು ಬೆಂಗಳೂರಿನ ಲಾಲ್‌ಬಾಗ್ ಆವರಣದ ಪುರಾತನ ಮಡಕೆಗಳೊಂದಿಗೆ ತಾಳೆ ಹಾಕಿ ವಿವರಿಸಿರುವುದು ಒಂದು ಮಹತ್ವದ ಅಧ್ಯಯನವಾಗಿದೆ.

**ಜಾಲಹಳ್ಳಿ ಉತ್ಖನನ :** ಮುಂಚೈ ಹತ್ತಿರ ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಿ ಅವುಗಳನ್ನು ಕುರಿತು ಬರೆದ ಹೆಸರಾಂತ ವಿದ್ವಾಂಸರಾದ ಕೆ.ಆರ್.ಯು. ಟಾಡ್ ಅವರು ಬೆಂಗಳೂರಿನ ಜಾಲಹಳ್ಳಿ ಗ್ರಾಮದ ಬಳಿಯ ಬೆಟ್ಟಗಳ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗದ ಆಯುಧಗಳನ್ನು ಶೋಧಿಸಿದರು. ಅಲ್ಲದೆ ಅವರು ಚಿಕ್ಕ ಉತ್ಖನನವನ್ನು ಕೈಗೊಂಡು ಜಾಲಹಳ್ಳಿಯ ಸೂಕ್ಷ್ಮಶಿಲಾಯುಗದ ವಿವರಗಳನ್ನು ಕಲೆಹಾಕಿದರು. ಈ ಉತ್ಖನನದ ಪೂರ್ಣ ಮಾಹಿತಿಯನ್ನು ೧೯೪೮ರಲ್ಲಿ ಮ್ಯಾನ್ ಎಂಬ ಅಂತರರಾಷ್ಟ್ರೀಯ ನಿಯತಕಾಲಿಕೆಯಲ್ಲಿ ಪ್ರಕಟಿಸಿದರು (Todd 1948). ಈ ಚಿಕ್ಕ ಉತ್ಖನನದಲ್ಲಿ ದೊರೆತ ಅವಶೇಷಗಳಾದ ಶಿಲಾಯುಧಗಳು, ಮಡಕೆ ಚೂರುಗಳು ಇತ್ಯಾದಿಗಳನ್ನು ಅತ್ಯಂತ ವೈಜ್ಞಾನಿಕವಾಗಿ ಅವಲೋಕಿಸಿ ಉತ್ಖನನದ ಸ್ತರಗಳೊಂದಿಗೆ ತಾಳೆಹಾಕಿ ಅವುಗಳು ದೊರಕುವ ವಿಧಾನ ಹಾಗೂ ಸಂಬಂಧಗಳನ್ನು ಶಾಸ್ತ್ರೀಯವಾಗಿ ವಿವರಣೆ ನೀಡಿದ್ದಾರೆ. ಜಾಲಹಳ್ಳಿಯ ಈ ಶಿಲಾಯುಧಗಳು ಇಂಗ್ಲೆಂಡಿನ ಬ್ರಿಟಿಷ್ ಮ್ಯೂಸಿಯಮ್‌ನ ಸಂಗ್ರಹದಲ್ಲಿವೆ. ೧೯೫೬ರ ಸಂದರ್ಭದಲ್ಲಿ ಮೈಸೂರು ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿದ್ದ ಎಂ. ಶೇಷಾದ್ರಿಯವರು ಇಂಗ್ಲೆಂಡಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಈ ಜಾಲಹಳ್ಳಿಯ ಸೂಕ್ಷ್ಮಶಿಲಾಯುಗದ ಆಯುಧಗಳನ್ನು ಅಧ್ಯಯನ ಮಾಡಿದರು ಹಾಗೂ ಹೆಚ್ಚಿನ ಮಾಹಿತಿಯನ್ನು ತಮ್ಮ ಸಂಶೋಧನಾ ಗ್ರಂಥದಲ್ಲಿ ವಿಶ್ಲೇಷಿಸಿದ್ದಾರೆ (Seshadri 1956:33). ೧೯೪೫ರಲ್ಲಿ ಡಿ.ಹೆಚ್. ಗೊರ್ಡಾನ್ ಎಂಬವರು ಸರ್ಜಾಪುರ ಹಾಗೂ ಹೆಚ್.ಎ.ಎಲ್ ಕಾರ್ಖಾನೆ ಸಮೀಪದಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸೇರಿದ ಎರಡು ಪ್ರತ್ಯೇಕ ನೆಲೆಗಳನ್ನು ಶೋಧಿಸಿದರು (Gordon 1945).

**ವೀಲ್ಹರ್ ಆಗಮನ:** ದೇಶವು ಸ್ವಾತಂತ್ರ್ಯದ ಹೊಸ್ತಿಲಲ್ಲಿ ಇರುವ ಸಂದರ್ಭದಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಮುಖ್ಯಸ್ಥರ ಹುದ್ದೆಯನ್ನು ಹೆಸರಾಂತ ವಿದ್ವಾಂಸರಾದ ಮಾರ್ಟಿಮರ್ ವೀಲ್ಹರ್ ವಹಿಸಿಕೊಂಡರು. ಮಹಾಧಿಕಾರಿಯಾಗಿದ್ದ ವೀಲ್ಹರ್ ಅವರು ಇಲಾಖೆಯಲ್ಲಿ ಹಾಗೂ ದೇಶದ ಪುರಾತತ್ವ ಅಧ್ಯಯನದಲ್ಲಿ ಆಮೂಲಾಗ್ರ

ಬದಲಾವಣೆಗಳನ್ನು ತಂದರು. ಅವರು ಭಾರತದಲ್ಲಿ ಈಗಾಗಲೇ ಪ್ರಾಚೀನ ರೋಮನ್ ಸಾಮ್ರಾಜ್ಯದ ನಾಣ್ಯಗಳು ದೊರಕಿದ ಮಾಹಿತಿಗಳನ್ನು ಆಧರಿಸಿ ಪುರಾತತ್ವ ಅಧ್ಯಯನಗಳನ್ನು ಪ್ರಾರಂಭಿಸಿದ್ದರು. ಈ ಹಿನ್ನೆಲೆಯಲ್ಲಿ ಮೈಸೂರು ರಾಜ್ಯದ ಬೆಂಗಳೂರು ಒಳಗೊಂಡಂತೆ ಚಂದ್ರವಳ್ಳಿ, ಬ್ರಹ್ಮಗಿರಿ ಮುಂತಾದ ಸ್ಥಳಗಳಲ್ಲಿ ದೊರೆತ ರೋಮನ್ ನಾಣ್ಯಗಳನ್ನು ಕುರಿತು ಸೂಕ್ಷ್ಮವಾದ ಅಧ್ಯಯನ ನಡೆಸಿದರು. ಚಂದ್ರವಳ್ಳಿ ಹಾಗೂ ಬ್ರಹ್ಮಗಿರಿ ನೆಲೆಗಳಲ್ಲಿ ಮಾತ್ರವಲ್ಲದೆ ಪಾಂಡಿಚೆರಿ ಬಳಿಯ ಅರಿಕೆಮೇಡು ನೆಲೆಯಲ್ಲಿಯೂ ಉತ್ಖನನಗಳನ್ನು ನಡೆಸಿದರು (Wheeler 1946 ಮತ್ತು ಇವರದೇ ಇನ್ನೊಂದು ಲೇಖನ ನೋಡಿ– Wheeler 1947-48). ಆ ಮೂಲಕ ದಕ್ಷಿಣ ಭಾರತವು ಚರಿತ್ರೆಯ ಆರಂಭ ಕಾಲಕ್ಕೆ ರೋಮನ್ ಸಾಮ್ರಾಜ್ಯದೊಂದಿಗೆ ವ್ಯಾಪಾರ–ವಾಣಿಜ್ಯಗಳ ಸಂಪರ್ಕಗಳನ್ನು ಹೊಂದಿದ್ದ ಬಗ್ಗೆ ಚರಿತ್ರೆಯ ಆಕರಗಳಾದ ವಿವಿಧ ಮಡಕೆ, ನಾಣ್ಯ ಮತ್ತಿತರ ಅವಶೇಷಗಳನ್ನು ಶೋಧಿಸಿದರು. ಇದರಿಂದ ಬೆಂಗಳೂರಿನಲ್ಲಿ ದೊರೆತ ರೋಮನ್ ನಾಣ್ಯಗಳು ಹೆಚ್ಚಿನ ಮಹತ್ವ ಪಡೆದವು.

**ಎಂ. ಶೇಷಾದ್ರಿ ಅವರ ಶೋಧನೆಗಳು:** ಸ್ವಾತಂತ್ರ್ಯೋತ್ತರ ಕಾಲದಲ್ಲಿ ಬೆಂಗಳೂರಿನ ಪರಿಸರದ ಪುರಾತತ್ವ ಅಧ್ಯಯನಗಳಿಗೆ ಅಪಾರ ಕಾಣಿಕೆ ನೀಡಿದವರಲ್ಲಿ ಎಂ. ಶೇಷಾದ್ರಿಯವರು ಪ್ರಮುಖರು. ಇವರು ಕೆಲವು ಮಹತ್ವದ ಉತ್ಖನನಗಳನ್ನು ಮಾಡುವುದರ ಮೂಲಕ ಬೆಂಗಳೂರು ಪರಿಸರದ ಕಬ್ಬಿಣಯುಗದ ಚರಿತ್ರೆಯನ್ನು ಪುನರ್ರಚಿಸಲು ಅವಕಾಶ ಒದಗಿಸಿದರು. ಶೇಷಾದ್ರಿಯವರು ವೀಲ್ಹರ್ ಅವರ ಮಾರ್ಗದರ್ಶನ ಹಾಗೂ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಕಲಿತ ಸಂಶೋಧನೆಯ ಅನುಭವಗಳಿಂದ ಪುರಾತತ್ವ ಅಧ್ಯಯನಗಳಿಗೆ ಆಧುನಿಕತೆಯ ಸ್ಪರ್ಶ ನೀಡಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ೧೯೫೬–೫೭ರ ಅವಧಿಯಲ್ಲಿ ಜಡಿಗೇನಹಳ್ಳಿಯಲ್ಲಿ ದೊಡ್ಡ ಪ್ರಮಾಣದ ಉತ್ಖನನಗಳನ್ನು ನಡೆಸಿ ಕಬ್ಬಿಣಯುಗದ ನಾಲ್ಕು ಪ್ರಮುಖ ಸಮಾಧಿಗಳನ್ನು ಹೊರತೆಗೆದರು (Seshadri 1960). ಮಣ್ಣಿನಲ್ಲಿ ಮಾಡಿದ ಶವಪೆಟ್ಟಿಗೆ, ಕೆಲವು ಮಹತ್ವದ ಮಡಕೆಗಳು ಹಾಗೂ ಕಬ್ಬಿಣದ ಆಯುಧಗಳನ್ನು ಶೋಧಿಸಿದರು. ಕಾವೇರಿ ಸೀಮೆಯ ಪ್ರಾಚೀನ ಸಂಸ್ಕೃತಿಗಿಂತಲೂ ಭಿನ್ನವಾದ ಸಂಸ್ಕೃತಿ ಜಡಿಗೇನಹಳ್ಳಿ ಹಾಗೂ ಬೆಂಗಳೂರು ಪರಿಸರ ಹೊಂದಿತ್ತು ಎಂಬುದು ಈ ಉತ್ಖನನಗಳ ಅವಶೇಷಗಳಿಂದ ಸ್ಪಷ್ಟವಾಯಿತು (Seshadri 1960:64). ಶೇಷಾದ್ರಿಯವರು ಜಡಿಗೇನಹಳ್ಳಿ ಅಲ್ಲದೇ ಬೆಂಗಳೂರು ಪರಿಸರದಲ್ಲಿ ಇನ್ನೂ ಕೆಲವು ಪ್ರಾಚೀನ ನೆಲೆಗಳನ್ನು ಶೋಧಿಸಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ೧೯೫೭–೫೮ ಅವಧಿಯಲ್ಲಿ ಆನೇಕಲ್ ಪಟ್ಟಣದ ಹತ್ತಿರ ಇತಿಹಾಸ ಆರಂಭ ಕಾಲದ ಅವಶೇಷಗಳನ್ನು ಶೋಧಿಸಿದರು (*IAR* 1957-58:68). ಅಲ್ಲದೆ ದೇವನಹಳ್ಳಿ ಹತ್ತಿರ ಕಣ್ಣೂರಿನಲ್ಲಿ ಬೃಹತ್ ಶಿಲಾಗೋರಿಗಳನ್ನು ೧೯೬೦–೬೧ರಲ್ಲಿ ಶೋಧಿಸಿದರು (*IAR* 1960-61:64). ಇದೇ ಅವಧಿಯಲ್ಲಿ ಶೇಷಾದ್ರಿಯವರು ಮತ್ತೆ ತರಬನಹಳ್ಳಿಯ ಇತಿಹಾಸ ಆರಂಭ ಕಾಲದ ಅವಶೇಷಗಳನ್ನು ಕುರಿತು ವಿಶೇಷ ಅಧ್ಯಯನ ನಡೆಸಿದರು (*IAR* 1960-61:64).

**ಕೇಂದ್ರ ಪುರಾತತ್ವ ಇಲಾಖೆಯ ಬೆಂಗಳೂರು ವಲಯ ಸ್ಥಾಪನೆ:** ೧೯೭೫ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು *Mid-Southern Circle* ಹೆಸರಿನ ತನ್ನ ನೂತನ ವಲಯದ ಕೇಂದ್ರವನ್ನು ಬೆಂಗಳೂರಿನಲ್ಲಿ ಸ್ಥಾಪನೆ ಮಾಡಿತು. ಇದರಿಂದ ಬೆಂಗಳೂರಿನ ಪರಿಸರದ ಪುರಾತತ್ವ ಶೋಧನೆಗೆ ಪ್ರಾಮುಖ್ಯತೆ ದೊರೆಯಿತು. ಸಿ. ಕೃಷ್ಣಮೂರ್ತಿ, ಎಸ್.ಆರ್.

ರಾವ್, ಕೆ.ಪಿ. ಪೂಣಚ್ಚ, ರಾಜನ್ ಮುಂತಾದ ಪುರಾತತ್ವಜ್ಞರು ಬೆಂಗಳೂರಿನ ಪರಿಸರದ ಅನೇಕ ಪುರಾತನ ನೆಲೆಗಳನ್ನು ಇಲಾಖೆಯ ವತಿಯಿಂದ ಶೋಧಿಸಿದ್ದಾರೆ. ೧೯೭೦-೭೧ರ ಅವಧಿಯಲ್ಲಿ ಕೇಂದ್ರ ಪುರಾತತ್ವ ಇಲಾಖೆಯ ಸಿ. ಕೃಷ್ಣಮೂರ್ತಿಯವರ ಮನಗೊಂಡನಹಳ್ಳಿಯ ಬಳಿ ಅಂತ್ಯ ಹಳೆ ಶಿಲಾಯುಗದ *(Late-Stone Age* ಅಥವಾ *Upper Palaeolithic Age)* ಆಯುಧಗಳನ್ನು ಶೋಧಿಸಿದರು (*IAR* 1970-71:27). ಅಲ್ಲದೇ ದಕ್ಷಿಣ ಪಿನಾಕಿನಿ ನದಿ ಕಣಿವೆಯ ಬೂದಿಕೋಟೆ ಹಾಗೂ ಬನಹಳ್ಳಿಯಲ್ಲಿಯೂ ನವಶಿಲಾಯುಗದ ಆಯುಧಗಳ ಶೋಧನೆಯನ್ನು ೧೯೭೩ರಲ್ಲಿ ನಡೆಸಿದರು (*IAR* 1970-71:28).

ಕೇಂದ್ರ ಪುರಾತತ್ವ ಇಲಾಖೆಯ ಬೆಂಗಳೂರು ವಲಯದ ಮುಖ್ಯಸ್ಥರಾಗಿ ಎಸ್.ಆರ್. ರಾವ್ ಅವರು ೧೯೭೫ರಲ್ಲಿ ನೇಮಕಗೊಂಡ ನಂತರ ಬೆಂಗಳೂರಿನ ಕೇಂದ್ರ ಪ್ರದೇಶಗಳಾದ ರಾಗಿಗುಡ್ಡ, ಬಸವನಗುಡಿ ಮುಂತಾದೆಡೆಗಳಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸೇರಿದ ಶಿಲಾಯುಧಗಳನ್ನು ೧೯೭೫-೭೬ರ ಕಾಲಾವಧಿಯಲ್ಲಿ ಶೋಧಿಸಿದರು (*IAR* 1975-76:19).

೧೯೬೫ರ ಅವಧಿಯಲ್ಲಿ ಹೆಚ್.ಎ.ಎಲ್ ವಿಮಾನ ನಿಲ್ದಾಣದ ನೂತನ ರನ್‌ವೇ ಕಾಮಗಾರಿಯ ವೇಳೆಯಲ್ಲಿ ಚರಿತ್ರೆ ಆರಂಭ ಕಾಲಕ್ಕೆ ಸೇರಿದ ಕೆಂಪು ವರ್ಣದ ದೊಡ್ಡ ಮಡಕೆಯಲ್ಲಿ ಸು. ೨೫೬ ರೋಮನ್ ನಾಣ್ಯಗಳು ದೊರಕಿದವು. ಕ್ರಿ.ಶ. ೧ನೇ ಶತಮಾನದ ರೋಮನ್ ಚಕ್ರವರ್ತಿಗಳಾದ 'ಅಗಸ್ಟಸ್' ಹಾಗೂ 'ಟೈಬಿರಿಯಸ್' ಅವರ ಆಳ್ವಿಕೆಯ ಕಾಲದ ಈ ನಾಣ್ಯಗಳು ಬೆಂಗಳೂರು ಪರಿಸರದ ಪ್ರಾಮುಖ್ಯತೆಯನ್ನು ಇಮ್ಮಡಿಗೊಳಿಸಿದವು. ಈ ನಾಣ್ಯಗಳ ಜೊತೆಗೆ ಇದೇ ಸ್ಥಳದಲ್ಲಿ ಇತಿಹಾಸ ಆರಂಭ ಕಾಲದ ಕಾವಿ ಲೇಪಿತ ಬಳಿ ಚಿತ್ರವುಳ್ಳ ಮಡಕೆ*(Russet Coated Painted Ware)*ಗಳು ದೊರಕಿದ್ದು, ಇವು ನಾಣ್ಯಗಳ ಪ್ರಾಚೀನತೆಯನ್ನು ದೃಢಪಡಿಸಿವೆ. ಬಿ.ಎಲ್. ರೈಸ್ ಅವರು ಪ್ರಕಟಿಸಿದ ಎಲ್ಲ ವರದಿಗಳನ್ನು ಪ್ರೊ. ಅ. ಸುಂದರ ಅವರು ೧೯೮೯ರಲ್ಲಿ ಸಂಪಾದಿಸಿದ ಗ್ರಂಥದಲ್ಲಿ ಈ ವರದಿಯನ್ನೂ ಕಾಣಬಹುದು. ಆ ಕೃತಿಯ 'ಮುನ್ನುಡಿ'ಯಲ್ಲಿ ಸುಂದರ ಅವರು ಈ ವಿಷಯವನ್ನು ವಿವರಿಸಿದ್ದಾರೆ (ನೋಡಿ– Sundara 1989:20).

೧೯೭೫ರಲ್ಲಿ ಎಸ್.ಆರ್. ರಾವ್ ಅವರ ಜೊತೆಗೂಡಿ ಕೆ.ಪಿ. ಪೂಣಚ್ಚ ಅವರು ದೇವನಹಳ್ಳಿ ಬಳಿ ಸೂಕ್ಷ್ಮಶಿಲಾಯುಗದ ಆಯುಧಗಳನ್ನು ಶೋಧಿಸಿದರು (*IAR* 1975-76:19). ೧೯೭೬ರ ಅವಧಿಯಲ್ಲಿ ಕೇಂದ್ರ ಪುರಾತತ್ವ ಇಲಾಖೆಯ ಎಂ.ವಿ. ವಿಶ್ವೇಶ್ವರ ಅವರು ಆನೇಕಲ್ ತಾಲೂಕಿನ ಮುತ್ಯಾಲಮಡು ಪ್ರದೇಶದಲ್ಲಿ ನವಶಿಲಾಯುಗದ ಆಯುಧಗಳನ್ನು ಶೋಧಿಸಿದರು (*IAR* 1975-76:101). ಬೆಂಗಳೂರಿನ ಪರಿಸರದಲ್ಲಿ ಸೂಕ್ಷ್ಮಶಿಲಾಯುಗದ ಅನೇಕ ನೆಲೆಗಳನ್ನು ಹಲವಾರು ವಿದ್ವಾಂಸರು ಶೋಧಿಸಿದ ಉದಾಹರಣೆಗಳಿವೆ. ಆದರೆ ನವಶಿಲಾಯುಗದ ಅವಶೇಷಗಳು ಬೆಂಗಳೂರು ಪ್ರದೇಶದಲ್ಲಿ ದೊರಕಿದ ವರದಿಗಳು ವಿರಳ. ಈ ಹಿನ್ನೆಲೆಯಲ್ಲಿ ವಿಶ್ವೇಶ್ವರ ಅವರ ಶೋಧನೆ ಬಹಳ ಮಹತ್ವದ್ದು. ನವಶಿಲಾಯುಗದ ಬೂದಿದಿಣ್ಣೆಗಳು ದಕ್ಷಿಣ ಕರ್ನಾಟಕದಲ್ಲಿ ಪ್ರಚಲಿತದಲ್ಲಿರಲಿಲ್ಲ ಎಂಬ ನಂಬಿಕೆ ಪುರಾತತ್ವ ಅಧ್ಯಯನದಲ್ಲಿತ್ತು. ಆದರೆ ೧೯೮೦-೮೧ರ ಅವಧಿಯಲ್ಲಿ ಕೇಂದ್ರ ಪುರಾತತ್ವ ಇಲಾಖೆಯ ಎ.ಕೆ. ಶರ್ಮಾ ಅವರು ತುಮಕೂರು ಜಿಲ್ಲೆಯ ಗಂಗವಾರದ

ಜಲಗಾರ ದಿಬ್ಬ ಮುಂತಾದ ಕಡೆಗಳಲ್ಲಿ ಬೂದಿದಿಣ್ಣೆಗಳ ಶೋಧನೆ ನಡೆಸಿ ವರದಿ ನೀಡಿದರು (*IAR* 1980-81:92). ಬೆಂಗಳೂರಿನ ಪರಿಸರದಲ್ಲಿಯೂ ನವಶಿಲಾಯುಗದ ಬೂದಿದಿಣ್ಣೆಗಳು ದೊರಕುವ ಸಾಧ್ಯತೆಗಳು ಈ ಶೋಧನೆಗಳಿಂದ ವ್ಯಕ್ತವಾದವು.

ನೆಲಮಂಗಲ ತಾಲೂಕಿನ ಹೆಗ್ಗುಂದ ಗ್ರಾಮದ ಬಳಿ ಕಬ್ಬಿಣಯುಗ ಹಾಗೂ ಇತಿಹಾಸ ಆರಂಭ ಕಾಲದ ಮಡಕೆಗಳು ಹಾಗೂ ಇತರ ಅವಶೇಷಗಳನ್ನು ಕೇಂದ್ರ ಪುರಾತತ್ವ ಇಲಾಖೆಯವರು ೧೯೮೧ರಲ್ಲಿ ಶೋಧಿಸಿದರು (*IAR* 1981-82:92). ೧೯೮೩ ರಿಂದ ೧೯೮೭ ರವರೆಗೆ ಕೇಂದ್ರ ಪುರಾತತ್ವ ಇಲಾಖೆಯ ಎಲ್.ಕೆ. ಶ್ರೀನಿವಾಸ್, ಸಿ. ಕೃಷ್ಣಮೂರ್ತಿ ಮತ್ತು ಬಿ. ನರಸಿಂಹಯ್ಯ ಅವರ ತಂಡದವರು ದಕ್ಷಿಣ ಪಿನಾಕಿನಿ ನದಿ ಕಣಿವೆಯಲ್ಲಿ ಬರುವ ಕೋಲಾರ ಜಿಲ್ಲೆಯ ಬನಹಳ್ಳಿಯಲ್ಲಿ ಉತ್ಖನನಗಳನ್ನು ನಡೆಸಿದರು (Krishnamurthy 1990). ಬೆಂಗಳೂರು ಪರಿಸರದ ಆಚೆ ಈ ನೆಲೆಗಳಿದ್ದರೂ ಬೆಂಗಳೂರು ಪರಿಸರದ ಪ್ರಾಗೈತಿಹಾಸಿಕ ಅಧ್ಯಯನಗಳಿಗೆ ಪೂರಕ ಮಾಹಿತಿಯನ್ನು ಒದಗಿಸಿರುವುದರಿಂದ ಈ ನೆಲೆಯ ಉತ್ಖನನಗಳು ಮಹತ್ವ ಪಡೆಯುತ್ತವೆ. ನವಶಿಲಾಯುಗ, ತಾಮ್ರಯುಗ, ಕಬ್ಬಿಣಯುಗ ಹಾಗೂ ಇತಿಹಾಸ ಆರಂಭ ಕಾಲ ಎಂಬ ನಾಲ್ಕು ಹಂತಗಳ ಅವಶೇಷಗಳು ಇಲ್ಲಿ ದೊರೆತಿದ್ದು, ಅತ್ಯಂತ ವೈಜ್ಞಾನಿಕವಾದ ಅಧ್ಯಯನಗಳು ಇಲ್ಲಿ ನಡೆದು ಬೆಂಗಳೂರಿನ ಪರಿಸರದ ಚರಿತ್ರೆಗೆ ಬಹಳ ಪ್ರಮುಖ ಆಕರಗಳನ್ನು ಒದಗಿಸುತ್ತವೆ.

**ಕರ್ನಾಟಕ ಇತಿಹಾಸ ಅಕಾದೆಮಿಯ ಸ್ಥಾಪನೆ ಹಾಗೂ ಬೆಂಗಳೂರು ಪರಿಸರದ ಪುರಾತತ್ವ ಅಧ್ಯಯನಗಳು:** ೧೯೮೫ರಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿ ಸ್ಥಾಪನೆಯಾಯಿತು. ಯುವ ಹಾಗೂ ಉತ್ಸಾಹಿ ಚರಿತ್ರೆಕಾರರು ಮುಕ್ತವಾಗಿ ಚರ್ಚಿಸಲು ಅವಕಾಶ ನೀಡುವ ಈ ಸಂಸ್ಥೆಯ ಅಡಿಯಲ್ಲಿ ಹೊಸ ಶೋಧನೆಗಳಿಗೆ ವಿಪುಲ ಪ್ರೋತ್ಸಾಹ ದೊರಕಿತು. ಬೆಂಗಳೂರು ಈ ಸಂಸ್ಥೆಯ ಕೇಂದ್ರವಾಗಿದ್ದರಿಂದ ಬೆಂಗಳೂರಿನ ಪರಿಸರದ ಪುರಾತತ್ವ ಹಾಗೂ ಚರಿತ್ರೆಗೆ ಹೆಚ್ಚಿನ ಆದ್ಯತೆ ದೊರೆಯಿತು.

೧೯೯೩ರಲ್ಲಿ ದೇವರ ಕೊಂಡಾರೆಡ್ಡಿಯವರು ಬನ್ನೇರುಘಟ್ಟ ಪರಿಸರದ ಸಂಪಿಗೆಹಳ್ಳಿ, ವಾಜರಹಳ್ಳಿ ಮತ್ತು ಷರಿಫ್ ಗಾರ್ಡನ್ ಪ್ರದೇಶದಲ್ಲಿ ಕಬ್ಬಿಣಯುಗದ ಶಿಲಾಗೋರಿಗಳನ್ನು ಶೋಧಿಸಿದರು (ಕೊಂಡಾರೆಡ್ಡಿ ೧೯೯೩). ಮರು ವರ್ಷ ೧೯೯೪ರಲ್ಲಿ ಹೆಚ್.ಎಸ್. ಗೋಪಾಲರಾವ್ ಅವರು ಮಾಗಡಿ ತಾಲ್ಲೂಕಿನ ಹೂಜಿಗಲ್ಲು ಗ್ರಾಮದ ಬಳಿ ಬೃಹತ್ ಶಿಲಾಗೋರಿಗಳ ಶೋಧನೆಯ ವರದಿ ನೀಡಿದರು (ಗೋಪಾಲರಾವ್ ೧೯೯೪). ಯುವ ಸಂಶೋಧಕರಾದ ಜೆ. ವಿಶ್ವನಾಥ, ಎಂ.ಜಿ. ಮಂಜುನಾಥರು ದೊಡ್ಡಬಳ್ಳಾಪುರ ತಾಲೂಕಿನ ಸಾಸಲು, ನೆಲಮಂಗಲ ತಾಲೂಕಿನ ಕಲ್ಯಾಣಪುರ, ಹನುಮನಪಾಳ್ಯ, ಮೈಲನಹಳ್ಳಿ, ಸೋಂಪುರ ಹಾಗೂ ರಾಮನಗರ ಪ್ರದೇಶದ ವಡೇರಹಳ್ಳಿ, ಗಂಗರಾಜಹಳ್ಳಿ, ಇತ್ಯಾದಿ ಕಡೆಗಳಲ್ಲಿ ಬೃಹತ್ ಶಿಲಾಗೋರಿಗಳು, ನಿಲುಗಲ್ಲುಗಳು ಹಾಗೂ ರೇಖಾಚಿತ್ರಗಳನ್ನು ೧೯೯೫ರ ಅವಧಿಯಲ್ಲಿ ಶೋಧಿಸಿ ಪ್ರಕಟಿಸಿದರು (ಮಂಜುನಾಥ ೧೯೯೫). ಆನೇಕಲ್ ತಾಲೂಕಿನ ವೆಲೂರು ದಿನ್ನೆ, ಕಾಳನಾಯಕನಹಳ್ಳಿ ಪರಿಸರದಲ್ಲಿ ಇತಿಹಾಸ ಆರಂಭ ಕಾಲದ ಕೆಲವು ಸುಟ್ಟ ಮಣ್ಣಿನ ಗೊಂಬೆಗಳು ಮತ್ತಿತರ ಅವಶೇಷಗಳನ್ನು ಸ್ಮಿತಾರೆಡ್ಡಿಯವರು ೧೯೯೬ರಲ್ಲಿ ಶೋಧಿಸಿದರು (ಸ್ಮಿತಾರೆಡ್ಡಿ ೧೯೯೬). ಎಂ. ಶೇಷಾದ್ರಿಯವರು ಈ ಹಿಂದೆ ೧೯೫೭ರಲ್ಲಿ ಇದೇ ಆನೇಕಲ್ ಪ್ರದೇಶದಲ್ಲಿ ಇತಿಹಾಸ ಆರಂಭ ಕಾಲದ ಅವಶೇಷಗಳನ್ನು ಶೋಧಿಸಿದ್ದನ್ನು

ಸ್ಮರಿಸಬಹುದು ಪ್ರಾಯಶಃ ಸ್ಮಿತಾರೆಡ್ಡಿಯವರ ಈ ಶೋಧನೆಯು ಆನೇಕಲ್ ಪ್ರದೇಶದಲ್ಲಿ ಕ್ರಿ.ಶ. ೧ನೇ ಶತಮಾನದ ಸಂಸ್ಕೃತಿ ಬಹಳ ಸಮೃದ್ಧಿಯಾಗಿ ಬೆಳೆದಿತ್ತು ಎಂಬುದನ್ನು ಸಾಬೀತು ಮಾಡುತ್ತದೆ.

೧೯೯೦ರ ದಶಕದಲ್ಲಿ ಬೆಂಗಳೂರು ಪರಿಸರದ ಪ್ರಾಗೈತಿಹಾಸಿಕ ನೆಲೆಗಳ ಶೋಧನೆ ಹೆಚ್ಚು ಮುತುವರ್ಜಿ ವಹಿಸಿದವರಲ್ಲಿ ಮುತ್ತುರಾಜು, ಎಂ. ಲೋಕೇಶ ಹಾಗೂ ಸಾಸಲು ವಿಶ್ವನಾಥ ಅವರು ಪ್ರಮುಖರು. ಇವರೆಲ್ಲರೂ ಪ್ರತ್ಯೇಕವಾಗಿ ಸುಮಾರು ೨೫ಕ್ಕೂ ಹೆಚ್ಚು ಕಬ್ಬಿಣಯುಗಕ್ಕೆ ಸೇರಿದ ಪುರಾತನ ನೆಲೆಗಳನ್ನು ಶೋಧಿಸಿದ್ದಾರೆ (ಮಂಜುನಾಥ ೧೯೯೬; ೧೯೯೮; ಲೋಕೇಶ ೧೯೯೯; ಸಾಸಲು ೧೯೯೯; ೨೦೦೩; ಜಯರಾಮಯ್ಯ ೧೯೯೮) ಮತ್ತೊಬ್ಬ ಯುವ ಸಂಶೋಧಕ ಎಂ. ಬೈರೇಗೌಡ ಅವರು ೨೦೦೨ರಲ್ಲಿ ಅರ್ಕಾವತಿ ನದಿಯ ಕಣಿವೆಯ ಕೂನಗಲ್ ಬೆಟ್ಟದಲ್ಲಿ ನವಶಿಲಾಯುಗದ ಆಯುಧಗಳನ್ನು ಶೋಧಿಸಿದ್ದಾರೆ (ಬೈರೇಗೌಡ ೨೦೦೨).

**ರಾಜಘಟ್ಟ ಉತ್ಖನನಗಳು** : ಬೆಂಗಳೂರು ಪರಿಸರದ ಅರ್ಕಾವತಿ ಕಣಿವೆಯಲ್ಲಿ ನಡೆದ ಮತ್ತೊಂದು ಪ್ರಮುಖ ಉತ್ಖನನಗಳಲ್ಲಿ ರಾಜಘಟ್ಟ ಉತ್ಖನನ ಪ್ರಮುಖವಾದುದು. ೨೦೦೧ ರಿಂದ ೨೦೦೪ ರವರೆಗೆ ಎಂ.ಎಸ್. ಕೃಷ್ಣಮೂರ್ತಿಯವರ ನೇತೃತ್ವದಲ್ಲಿ ಮೈಸೂರು ವಿಶ್ವವಿದ್ಯಾಲಯ ಹಾಗೂ ರಾಜ್ಯ ಪುರಾತತ್ವ ಇಲಾಖೆಗಳೆರಡು ಉತ್ಖನನ ಕೈಗೊಂಡು ಬೌದ್ಧ ಚೈತ್ಯಾಲಯ ಹಾಗೂ ಮತ್ತಿತರ ಮಹತ್ವದ ಅವಶೇಷಗಳನ್ನು ಶೋಧಿಸಿದರು. ದಕ್ಷಿಣ ಕರ್ನಾಟಕದಲ್ಲಿಯೂ ಬೌದ್ಧಕೇಂದ್ರ ಇತ್ತು ಎಂಬುದು ರಾಜಘಟ್ಟ ನೆಲೆಯಿಂದ ಸಾಬೀತಾಗಿದೆ (ಕೃಷ್ಣಮೂರ್ತಿ ಮತ್ತು ಮಹದೇವಯ್ಯ ೨೦೦೨).

ಒಟ್ಟಿನಲ್ಲಿ ಬೆಂಗಳೂರು ಪರಿಸರದಲ್ಲಿ ೧೪೦ ವರ್ಷಗಳಿಂದ ನಿರಂತರವಾಗಿ ಪುರಾತತ್ವ ಅಧ್ಯಯನಗಳು ನಡೆಯುತ್ತಾ ಬಂದಿವೆ. ೧೮೭೩ರಲ್ಲಿ ರಾಬರ್ಟ್ ಕೋಲ್ ಅವರಿಂದ ಪ್ರಾರಂಭಗೊಂಡು, ಇತ್ತೀಚಿನ ಸಂಶೋಧಕರವರೆಗೂ ಈ ಕಾರ್ಯ ಮುಂದುವರಿದಿದೆ. ಇವುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅನ್ವೇಷಣಾ ಕಾರ್ಯಗಳಾದರೆ ಕೇವಲ ಆರು ಸ್ಥಳಗಳಲ್ಲಿ ಮಾತ್ರ ಉತ್ಖನನ ಕೈಕೊಂಡಿರುವುದನ್ನು ಕಾಣಬಹುದು. ಇವುಗಳೇ ಸಾವನದುರ್ಗದ ಇಟ್ಟಿಗೆಬೈಲು, ಬೆಳ್ಳಂದೂರು, ಮನಗೊಂಡನಹಳ್ಳಿ, ಜಾಲಹಳ್ಳಿ, ಜಡಿಗೇನಹಳ್ಳಿ ಹಾಗೂ ರಾಜಘಟ್ಟಗಳಾಗಿವೆ. ಇವುಗಳಲ್ಲಿ ನಾಲ್ಕು ನೆಲೆಗಳು ಕಬ್ಬಿಣಯುಗದ ಬೃಹತ್ ಶಿಲಾಗೋರಿಗಳ ಸಂಸ್ಕೃತಿಗೆ ಸೇರಿದರೆ, ಉಳಿದೆರಡು ನೆಲೆಗಳು ಸೂಕ್ಷ್ಮ ಶಿಲಾಯುಗ ಹಾಗೂ ಬೌದ್ಧಧರ್ಮದ ಅವಶೇಷಗಳನ್ನು ಒಳಗೊಂಡಿವೆ. ಇನ್ನು, ಅನ್ವೇಷಣೆ ನಡೆಸಿದ ಸ್ಥಳಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಬ್ಬಿಣಯುಗದ ಬೃಹತ್ ಶಿಲಾಗೋರಿಗಳ ನೆಲೆಗಳು ಶೋಧನೆಗೊಂಡಿವೆ. ಎರಡನೆಯ ಸ್ಥಾನದಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆಗಳ ಶೋಧನೆಯಾಗಿದೆ (೫ ನೆಲೆಗಳು). ಇತಿಹಾಸ ಆರಂಭ ಕಾಲದ ಅವಶೇಷಗಳ ನೆಲೆಗಳು ಬೆಂಗಳೂರು ಪರಿಸರದಲ್ಲಿ ಅತಿಹೆಚ್ಚು ಸಂಖ್ಯೆಯಲ್ಲಿವೆ ಆದರೆ ಕ್ಷಿಪ್ರಗತಿಯಲ್ಲಿ ಉಂಟಾಗುತ್ತಿರುವ ನಗರೀಕರಣದ ಹಿನ್ನೆಲೆಯಲ್ಲಿ ಹೆಚ್ಚು ವ್ಯವಸ್ಥಿತವಾದ ಸಂಶೋಧನೆಗಳು ಆಗಿಲ್ಲದಿರುವುದು ಬೆಂಗಳೂರಿನ ಇತಿಹಾಸಕ್ಕೆ ಉಂಟಾದ ಬಹುದೊಡ್ಡ ನಷ್ಟ ಎಂದೇ ಹೇಳಬಹುದು. ಈ ಹಿನ್ನೆಲೆಯಲ್ಲಿ ತರಬನಹಳ್ಳಿ, ಜಡಿಗೇನಹಳ್ಳಿ, ಸಾವನದುರ್ಗ ಹಾಗೂ ಆನೇಕಲ್ ನೆಲೆಗಳು ಉಲ್ಲೇಖಾರ್ಹವಾಗಿವೆ. ಜಡಿಗೇನಹಳ್ಳಿ ಹೊರತುಪಡಿಸಿ ಉಳಿದ ಸ್ಥಳಗಳಲ್ಲಿ ದೊರೆತ ಅವಶೇಷಗಳ ಮಾಹಿತಿ ಅತಿ ಕಡಿಮೆಯಾಗಿದೆ. ಅತ್ಯಂತವಾ

ದೊರೆತ ರೋಮನ್ ನಾಣ್ಯಗಳ ಬಗ್ಗೆ ಅಪಾರ ಹೆಮ್ಮೆಯಿಂದ ನೋಡಲಾಗಿದೆಯೇ ಹೊರತು ಅವುಗಳ ವಿಶ್ಲೇಷಣಾತ್ಮಕ ಅಧ್ಯಯನವಾಗಲಿ ಅಥವಾ ದೊರೆತ ಸ್ಥಳಗಳಲ್ಲಿ ಉತ್ಖನನ ಕೈಗೊಳ್ಳುವ ಕಾರ್ಯವಾಗಲಿ ನಡೆದಿಲ್ಲ. ಅನ್ವೇಷಣೆ ಹಾಗೂ ಉತ್ಖನನಗಳನ್ನು ಕೈಗೊಂಡ ಸ್ಥಳಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಗಳು ಇಲ್ಲಿಯ ನದಿಗಳ ನೀರಿನ ಆಶ್ರಯಗಳನ್ನು ಆಧರಿಸಿ ಉಗಮಗೊಂಡಿವೆ ಎಂಬ ಅಭಿಪ್ರಾಯ ಮೂಡುತ್ತದೆ. ಅರ್ಕಾವತಿ, ದಕ್ಷಿಣ ಪಿನಾಕಿನಿ ಹಾಗೂ ವೃಷಭಾವತಿ ನದಿಗಳ ಬಯಲಿನಲ್ಲಿ ಈ ನೆಲೆಗಳು ಕಂಡುಬರುತ್ತಿದ್ದು, ಸಂಸ್ಕೃತಿಯ ವಿಕಾಸಕ್ಕೆ ಈ ನದಿಗಳು ಬಹು ಮಹತ್ವದ ಪಾತ್ರವಹಿಸಿವೆ. ಇಲ್ಲಿಯ ನದಿ ದಂಡೆಗಳ ಫಲವತ್ತಾದ ಭೂಮಿ ಹಾಗೂ ಬೆಟ್ಟಗುಡ್ಡಗಳು ರಕ್ಷಣೆಯ ಜೊತೆಗೆ ಆಸರೆ ಮುಂತಾದ ಮೂಲಭೂತ ಸೌಕರ್ಯಗಳನ್ನು, ದಟ್ಟ ಕಾಡುಗಳು ಉರುವಲುಗಳನ್ನು ಒದಗಿಸುತ್ತಿದ್ದವು. ಉಳುಮೆಗೆ ಸಾಕುಪ್ರಾಣಿಗಳು ಸಂಸ್ಕೃತಿಯ ಭಾಗವಾಗಿದ್ದವು ಒಟ್ಟಿನಲ್ಲಿ ಪ್ರಾಚೀನ ಸಂಸ್ಕೃತಿಯ ಉಗಮಕ್ಕೆ ಯೋಗ್ಯ ಸ್ಥಳವಾಗಿ ಬೆಂಗಳೂರು ಪರಿಸರ ಭೂಮಿಕೆಯನ್ನು ಒದಗಿಸಿತ್ತು. ಆ ಕಾರಣಕ್ಕಾಗಿಯೇ ಪ್ರಾಚೀನ ಗಂಗ ಮತ್ತು ಬಾಣ ಅರಸರ ಸಂಘಟಿತ ರಾಜಕೀಯ ವ್ಯವಸ್ಥೆಗಳು ಇತಿಹಾಸ ಆರಂಭ ಕಾಲ ಕೊನೆಗೊಳ್ಳುತ್ತಿದ್ದಂತೆಯೇ ಈ ಪರಿಸರದಿಂದಲೇ ಪ್ರಾರಂಭಿಸಿರುವುದನ್ನು ಗುರುತಿಸಬಹುದು.

**ಬೆಂಗಳೂರು ಪರಿಸರದ ಭೌಗೋಳಿಕ ಹಿನ್ನೆಲೆ:**

ಸಮುದ್ರ ಮಟ್ಟದಿಂದ ೯೩೦ ಮಿ. ಎತ್ತರದಲ್ಲಿರುವ ಬೆಂಗಳೂರು ಪ್ರದೇಶ ಮೂಲತಃ ಒಂದು ಸಂಕೀರ್ಣ ಭೌಗೋಳಿಕ ಲಕ್ಷಣಗಳನ್ನು ಹೊಂದಿರುವ ಪರಿಸರ. ಈ ಪ್ರದೇಶವು ಕಿರು ಹಾಗೂ ದೊಡ್ಡ ಬೆಟ್ಟಗಳ ಶ್ರೇಣಿಗಳಿಂದ ಕೂಡಿದ ಎತ್ತರದ ಪ್ರದೇಶವಾಗಿದ್ದು, ಮೈಸೂರು ಪ್ರಸ್ಥಭೂಮಿಯ ಅಂಚಿನ ಪ್ರದೇಶವೆಂತಲೂ ಗುರುತಿಸುತ್ತಾರೆ (Clark 1839). ಇಲ್ಲಿ ಪಶ್ಚಿಮ ಘಟ್ಟಗಳ ಸಮೂಹದ ದಕ್ಷಿಣದ ಅಂಚು; ನೀಲಗಿರಿ ಬೆಟ್ಟಶ್ರೇಣಿಗಳ ಪೂರ್ವದ ಅಂಚು ಹಾಗೂ ಪೂರ್ವ ಘಟ್ಟಗಳ ಶ್ರೇಣಿಯ ಅಂಚುಗಳು ಸಮ್ಮಿಲನಗೊಳ್ಳುವುದನ್ನು ಕಾಣುತ್ತೇವೆ (Rama Rao 1939). 'ಟೇಬಲ್ ಲ್ಯಾಂಡ್' ಎಂದು ಕರೆಯಲ್ಪಡುವ ಎತ್ತರದ ಪ್ರಸ್ಥಭೂಮಿಯಾದ ಬೆಂಗಳೂರು ಪರಿಸರದಲ್ಲಿ ನದಿಗಳ ಉಗಮಗಳನ್ನು ಕಾಣಬಹುದು. ಅರ್ಕಾವತಿ, ದಕ್ಷಿಣ ಪಿನಾಕಿನಿ, ವೃಷಭಾವತಿ, ಕಣ್ವಾ ಮತ್ತು ಕುಮದ್ವತಿ ನದಿಗಳು ಈ ಪರಿಸರದಲ್ಲಿಯೇ ಹುಟ್ಟುತ್ತವೆ. ಈ ನದಿಗಳು ನಿರಂತರವಾಗಿ ನೀರಿನ ಆಶ್ರಯ ಒದಗಿಸುವುದರಿಂದ ಪ್ರಾಚೀನ ಕಾಲದಿಂದಲೂ ಹಲವು ಸಂಸ್ಕೃತಿಗಳು ಉಗಮಗೊಂಡು ಸಾಂಸ್ಕೃತಿಕ ಬದುಕನ್ನು ಇಲ್ಲಿ ಕಟ್ಟಿಕೊಟ್ಟಿವೆ. ಅರ್ಕಾವತಿ ಹಾಗೂ ದಕ್ಷಿಣ ಪಿನಾಕಿನಿ ನದಿಗಳು ನಂದಿ ಬೆಟ್ಟದ ತಪ್ಪಲಿನಲ್ಲಿ ಉಗಮಗೊಂಡು ಎರಡು ವಿರುದ್ಧ ದಿಕ್ಕಿನಲ್ಲಿ ಸಂಚರಿಸುತ್ತವೆ. ಬೆಂಗಳೂರು ಪರಿಸರದ ಪಶ್ಚಿಮ ದಿಕ್ಕಿನಲ್ಲಿ ಅರ್ಕಾವತಿ ನದಿ ತನ್ನ ಹರಿವನ್ನು ಕಂಡುಕೊಂಡರೆ, ದಕ್ಷಿಣ-ಪಿನಾಕಿನಿ ನದಿಯು ಬೆಂಗಳೂರಿನ ಪರಿಸರದ ಪೂರ್ವ ದಿಕ್ಕಿನಲ್ಲಿ ಹೊಸಕೋಟೆ. ಕೆ.ಆರ್.ಪುರಂ, ಕಾಡುಗೋಡಿ. ವರ್ತೂರು, ಸರ್ಜಾಪುರ ಮಾರ್ಗವಾಗಿ ಹರಿದು ಹೊಸೂರು ಮೂಲಕ ತಮಿಳುನಾಡು ಸೇರುತ್ತದೆ. ಈ ಎರಡು ನದಿಗಳು ಸಂಚರಿಸುವ ಕಣಿವೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ನೆಲೆಗಳನ್ನು ಗುರುತಿಸಲಾಗಿದೆ. ಈ ನದಿಗಳ ಹರಿವಿನ ಉದ್ದಕ್ಕೂ ಹರಡಿಕೊಂಡ ಪ್ರಾಗೈತಿಹಾಸಿಕ ಸಂಸ್ಕೃತಿಯ ನೆಲೆಗಳು ಎರಡು ವಿಭಿನ್ನ ಲಕ್ಷಣಗಳಿಂದ ಕೂಡಿರುವುದನ್ನು ದೊರೆತ

ಅವಶೇಷಗಳಿಂದ ಗುರುತಿಸಬಹುದಾಗಿದೆ. ಅದರಂತೆ ಬಸವನಗುಡಿಯ ದೊಡ್ಡ ಬಸವಣ್ಣನ ಗುಡಿಯ ಗುಡ್ಡದಲ್ಲಿ ವೃಷಭಾವತಿ ನದಿ ಜನ್ಮ ತಾಳುತ್ತದೆ. ಇದರ ಇನ್ನೊಂದು ಕವಲು ಪೀಣ್ಯದ ಎತ್ತರ ದಿಣ್ಣೆಗಳಲ್ಲಿ ಹುಟ್ಟಿ ಕೆಂಗೇರಿ ಮೂಲಕ, ಕುಂಬಳಗೋಡ, ಅಬ್ಬನಕುಪ್ಪೆ ಮೂಲಕ ಸು. ೫೨ ಕಿ.ಮಿ. ಹರಿದು ಸುವರ್ಣಮುಖಿ ನದಿಯನ್ನು ಸೇರುತ್ತದೆ. ಮುಂದೆ ಇವರೆಡು ಜೊತೆಗೂಡಿ ಅರ್ಕಾವತಿ ನದಿಯನ್ನು ಸೇರುತ್ತವೆ. ಈ ನದಿಯ ಆಶ್ರಯದಲ್ಲಿಯೂ ಹಲವಾರು ಪ್ರಾಗೈತಿಹಾಸಿಕ ನೆಲೆಗಳು ದೊರೆತಿವೆ. ಈ ಪ್ರಮುಖ ನದಿಗಳಲ್ಲದೆ, ಬೆಂಗಳೂರು ಪರಿಸರದಲ್ಲಿ ಹಲವಾರು ನೀರಿನ ತೊರೆಗಳು ಇದ್ದು ಇವು ಉಪ-ಕಣಿವೆಗಳಾಗಿ ಪರಿವರ್ತನೆಯಾಗುತ್ತವೆ. ಕೆಲವು ಮುಖ್ಯ ಉಪ-ಕಣಿವೆಗಳಾದ ಅಲ್ಲಾಳಸಂದ್ರ, ಹೆಬ್ಬಾಳ, ಕೋರಮಂಗಲ, ತಾವರೆಕೆರೆ, ಬನ್ನೇರುಘಟ್ಟ, ಇತ್ಯಾದಿ. ಈ ಉಪ-ಕಣಿವೆಗಳು ಪ್ರಾಗೈತಿಹಾಸಿಕ ಕಾಲದಲ್ಲಿ ಮಹತ್ವದ ಪಾತ್ರವಹಿಸಿದ್ದವು. ಕಬ್ಬಿಣ ಲೋಹ ಆವಿಷ್ಕಾರದ ಸಮಯದಲ್ಲಿ ಭೂಸಾಗುವಳಿ ಮಾಡುವುದಕ್ಕೆ ಈ ಉಪ-ಕಣಿವೆಗಳಲ್ಲಿಯ ಫಲವತ್ತಾದ ಭೂಮಿಯನ್ನು ಆಯ್ಕೆಮಾಡಿಕೊಂಡು ಅಲ್ಲಿಯ ಮರಗಳನ್ನು ಕಡಿದು ಕೃಷಿಗೆ ಬಳಸಿರುವ ಸಾಧ್ಯತೆಗಳನ್ನು ಪ್ರಾಗೈತಿಹಾಸಿಕ ನೆಲೆಗಳಲ್ಲಿ ದೊರೆತ ಅವಶೇಷಗಳಿಂದ ಗುರುತಿಸಬಹುದು.

ಬೆಂಗಳೂರು ಪರಿಸರದಲ್ಲಿ ಮೂಲತಃ ಗ್ರಾನೈಟ್ ಅಥವಾ ಬೆಣಚುಕಲ್ಲು ಸ್ತರಗಳಿರುವ ಶ್ರೇಣಿಗಳಿವೆ. ಈ ಬೆಣಚುಕಲ್ಲುಗಳು ಪ್ರಾಗೈತಿಹಾಸಿಕ ಮಾನವನ ಸಂಸ್ಕೃತಿಯ ಉಗಮಕ್ಕೆ ಪೂರಕವಾಗಿ ಸ್ಪಂದಿಸಿವೆ. ಈ ಬೆಣಚುಕಲ್ಲು ಬೆಟ್ಟಗಳ ಶಿಲೆಗಳಲ್ಲಿ ನೈಸರ್ಗಿಕವಾಗಿ ದೊರೆಯುವ ಶ್ವೇತವರ್ಣದ ಸ್ಪಟಿಕ ಶಿಲೆಗಳು, ಸೂಕ್ಷ್ಮಶಿಲಾಯುಗ ಕಾಲದಲ್ಲಿ ಹರಿತವಾದ ಚಿಕ್ಕ ಗಾತ್ರದ ಶಿಲಾಯುಧಗಳ ರಚನೆಗೆ ಬಳಸಿಕೊಂಡಿರುವುದನ್ನು ಗಮನಿಸಬಹುದು. ಈ ಬೆಣಚುಕಲ್ಲು ಸ್ತರಗಳಿರುವ ಬೆಟ್ಟಗಳ ಪ್ರದೇಶದಲ್ಲಿ ‘ಸೀತೆಯ ಸೆರಗು’ ಎಂದು ಕರೆಯಲ್ಪಡುವ ಕಪ್ಪು ಶಿಲೆಗಳು ಅಥವಾ ಡೈಕ್ ಶಿಲೆಗಳು ಭೂಗರ್ಭದಿಂದ ಹೊರಹೊಮ್ಮಿವೆ. ಈ ಶಿಲೆಗಳು ಗಟ್ಟಿಯಾಗಿರುವುದರಿಂದ ನವಶಿಲಾಯುಗ (Neolithic period) ಕಾಲದಲ್ಲಿ ಅವುಗಳನ್ನು ಉಜ್ಜಿ ನುಣುಪುಗೊಳಿಸಿ ಕೊಡಲಿಗಳನ್ನಾಗಿ ಮಾಡಲಾಗಿದೆ. ಮರಗಳನ್ನು ಕಡಿಯಲು ಬಳಸಬಹುದಾದ ಈ ಕಲ್ಲಿನ ಕೊಡಲಿಗಳು ಬೆಂಗಳೂರು ಪರಿಸರದ ಕೆಲವು ಪ್ರದೇಶದಲ್ಲಿ ದೊರೆತಿರುವ ವರದಿಗಳಿವೆ. ಅದರಂತೆ ಅರ್ಕಾವತಿ ನದಿಯ ಕಣಿವೆಯಲ್ಲಿ ಮುಖ್ಯವಾಗಿ ಮಾಗಡಿ-ರಾಮನಗರ ಪ್ರದೇಶದಲ್ಲಿ ಕಬ್ಬಿಣದ ಅದಿರು ದೊರಕುವ ಕುರುಹುಗಳಿವೆ. ೧೮೧೦ರ ದಶಕದಲ್ಲಿ ಫ್ರಾನ್ಸಿಸ್ ಬುಕಾನನ್ ಈ ಪ್ರದೇಶದಲ್ಲಿ ಕಬ್ಬಿಣ ಉಪಕರಣಗಳ ತಯಾರಿಕೆಯ ಗುಡಿಕೈಗಾರಿಕೆಗಳು ಇದ್ದ ಬಗ್ಗೆ ಮಾಹಿತಿಯನ್ನು ತಮ್ಮ ವರದಿಯಲ್ಲಿ ದಾಖಲಿಸಿದ್ದಾರೆ. ಮಾಗಡಿ-ರಾಮನಗರ ಪ್ರದೇಶ ಒಳಗೊಂಡಂತೆ ಬೆಂಗಳೂರಿನ ಪರಿಸರದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಬ್ಬಿಣಯುಗ ಸಂಸ್ಕೃತಿಯ ನೆಲೆಗಳು ದೊರಕಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಎತ್ತರದ ಪ್ರಸ್ಥಭೂಮಿಯಾಗಿರುವುದರಿಂದ ದೊಡ್ಡ ಮತ್ತು ಉಪ-ಕಣಿವೆಗಳು ಇಲ್ಲಿವೆ. ಈ ಕಣಿವೆಗಳ ಪ್ರದೇಶದಲ್ಲಿ ಮರಳುಯುಕ್ತ ಕೆಂಪು ಮಣ್ಣು ಹೇರಳವಾಗಿ ದೊರೆಯುತ್ತದೆ. ಪ್ರಾಗೈತಿಹಾಸಿಕ ಕಾಲದ ಬಹುತೇಕ ಮಡಕೆಗಳು ಈ ಕೆಂಪು ವರ್ಣದಲ್ಲಿ ರಚನೆಯಾಗಿರುವುದನ್ನು ಕಾಣುತ್ತೇವೆ. ಪ್ರಾಗೈತಿಹಾಸ ಕಾಲದ ಸಂಸ್ಕೃತಿಯ ಜನರು ತಮ್ಮ ಉಪಜೀವನಕ್ಕಾಗಿ ಯಥೇಚ್ಛವಾಗಿ ಲಭ್ಯವಾಗುವ ಕೆಂಪು ಮಣ್ಣಿನಿಂದ ಮಾಡಿದ ಮಡಕೆಗಳನ್ನು ಬಳಸುತ್ತಿದ್ದರೆಂಬುದನ್ನು ಗುರುತಿಸಬಹುದು. ಅರ್ಕಾವತಿ ಹಾಗೂ ವೃಷ

ಪಿನಾಕಿನಿ ನದಿಗಳ ಬಯಲುಗಳಲ್ಲಿ ಕೆಂಪು ವರ್ಣದ ಫಲವತ್ತಾದ ಭೂಮಿಯನ್ನು ಕಾಣಬಹುದು. ಈ ಭೂಮಿಗಳಲ್ಲಿ ಉಳುಮೆಮಾಡಿ ಸಮೃದ್ಧವಾದ ಜೀವನ ನಡೆಸಿರುವ ಸಾಧ್ಯತೆಗಳನ್ನು ಕಾಣಬಹುದು. ಅದೇರೀತಿ ನದಿಗಳ ದಂಡೆಯಲ್ಲಿ ಸಿಗುವ ನಯವಾದ ಮಣ್ಣಿನಿಂದ ಮಡಕೆ ತಯಾರಿಸಿರುವ ಸಾಧ್ಯತೆಗಳನ್ನು ಗಮನಿಸಬಹುದು. ಕೆಂಪು ಭೂಮಿಯಲ್ಲದೇ ಅಲ್ಲಲ್ಲಿ ಕಪ್ಪು ಭೂಮಿಯ ಪ್ರದೇಶಗಳನ್ನು ಗುರುತಿಸಬಹುದಾಗಿದೆ. ಕಬ್ಬಿಣ ಲೋಹ ಅವಿಷ್ಕಾರವಾದ ನಂತರ ಭೂ-ಉಳುಮೆಗೆ ಯೋಗ್ಯವಾದದ್ದು ಕಪ್ಪು ಭೂಮಿ, ಆ ಕಾರಣಕ್ಕಾಗಿ ಕಬ್ಬಿಣ ಯುಗದ ಹಾಗೂ ಇತಿಹಾಸ ಆರಂಭಕಾಲ(Early Historic Period)ದ ಅನೇಕ ಪುರಾತನ ನೆಲೆಗಳು ಈ ನೆಲದಲ್ಲಿ ದೊರಕಿರುವುದನ್ನು ಕಾಣುತ್ತೇವೆ. ಒಟ್ಟಿನಲ್ಲಿ ಬೆಂಗಳೂರು ಪರಿಸರ ತನ್ನ ಭೌಗೋಳಿಕ ಲಕ್ಷಣಗಳಿಂದಾಗಿ ಪ್ರಾಗೈತಿಹಾಸ ಕಾಲದ ಸಂಸ್ಕೃತಿಗಳ ವಿಕಾಸಕ್ಕೆ ಉತ್ತಮ ಭೂಮಿಕೆಯನ್ನು ಒದಗಿಸಿತ್ತು.

**ಪ್ರಾಗೈತಿಹಾಸಿಕ ಸಂಸ್ಕೃತಿಗಳ ನೋಟ**

ಅನ್ವೇಷಣೆ ಹಾಗೂ ಉತ್ಖನನಗಳಿಂದ ಹೊರಹೊಮ್ಮಿದ ಅವಶೇಷಗಳ ಶೋಧನೆಯ ಸಹಾಯದಿಂದ ಬೆಂಗಳೂರಿನ ಪರಿಸರದ ಪ್ರಾಗೈತಿಹಾಸಿಕ ಸಂಸ್ಕೃತಿಗಳ ಚರಿತ್ರೆಯನ್ನು ಕಟ್ಟುವುದು ಒಂದು ಸವಾಲು. ಆದರೂ ಒಂದು ಪುಟ್ಟ ಪ್ರಯತ್ನ ಇಲ್ಲಿದೆ.

**ಹಳೆಶಿಲಾಯುಗ ಸಂಸ್ಕೃತಿ:**

ಈವರೆಗೆ ದೊರಕಿದ ಅವಶೇಷಗಳನ್ನು ಆಧರಿಸಿ ಅವಲೋಕಿಸಲಾಗಿ ಬೆಂಗಳೂರು ಪರಿಸರದ ಪ್ರಾಚೀನತೆಯು ಕೇವಲ ಹತ್ತು ಸಾವಿರ ವರ್ಷ ಪುರಾತನವಾದ ಸೂಕ್ಷ್ಮಶಿಲಾಯುಗ ಸಂಸ್ಕೃತಿಯಷ್ಟು ಪ್ರಾಚೀನವಾದುದಾಗಿದೆ. ಆದರೆ ಬೆಂಗಳೂರು ಪರಿಸರದ ಆಸುಪಾಸಿನಲ್ಲಿ ಮುಖ್ಯವಾಗಿ ತುಮಕೂರು ಜಿಲ್ಲೆಯ ತಿಪಟೂರು ತಾಲೂಕು ಮತ್ತಿತರ ಅಕ್ಕಪಕ್ಕದ ತಾಲೂಕುಗಳಲ್ಲಿ ಸುಮಾರು ೫-೬ ಲಕ್ಷ ವರ್ಷಗಳ ಪುರಾತನ ಆದಿಮಾನವರು ಬಳಸಿದ ಶಿಲಾಯುಧಗಳಾದ ಕೈಕೊಡಲಿಗಳು ದೊರಕಿದ ವರದಿಗಳಿವೆ. ಮುಖ್ಯವಾಗಿ ಎಂ. ಶೇಷಾದ್ರಿಯವರು ೧೯೫೫ರಲ್ಲಿ ತಿಪಟೂರು ತಾಲೂಕಿನ ಕಿಬ್ಬನಹಳ್ಳಿ ಪ್ರದೇಶದಲ್ಲಿ ಶೋಧಿಸಿದ ಹಳೆಶಿಲಾಯುಗದ ಅವಶೇಷಗಳನ್ನು ಉಲ್ಲೇಖಿಸಬಹುದು (Seshadri 1955). ಬೆಂಗಳೂರು ಪರಿಸರದಲ್ಲಿಯೂ ಅದೇ ಕಾಲಕ್ಕೆ ಸೇರುವ ಹಲವಾರು ಅವಶೇಷಗಳು ದೊರಕುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಸಂಪತ್ ಅಯ್ಯಂಗಾರ್ ಅವರು ಶೋಧಿಸಿದ ಹಳೆಶಿಲಾಯುಗದ ಆಯುಧಗಳು ಕೂಡ ವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ಪುಷ್ಠಿ ನೀಡುತ್ತವೆ. ಪಕ್ಕದ ಕೋಲಾರ ಜಿಲ್ಲೆಯಲ್ಲಿಯೂ ಹಳೆಶಿಲಾಯುಗದ ಅವಶೇಷಗಳು ದೊರಕಿರುವ ಮಾಹಿತಿಗಳಿದ್ದು ಬೆಂಗಳೂರು ಪರಿಸರ ತುಮಕೂರು ಮತ್ತು ಕೋಲಾರ ಜಿಲ್ಲೆಗಳಿಗೆ ಹೊಂದಿಕೊಂಡಿದ್ದು ಹಾಗೂ ಸಮಾನ ಭೌಗೋಳಿಕ ಲಕ್ಷಣಗಳು ಇಲ್ಲಿರುವುದರಿಂದ ಸುಮಾರು ೫-೬ ಲಕ್ಷ ವರ್ಷ ಪುರಾತನ ಹಳೆಶಿಲಾಯುಗದ ಆದಿಮಾನವ ನೆಲೆಸಿದ್ದಿರಲು ಸಾಧ್ಯವಿದೆ. ಇದಕ್ಕೆ ಪೂರಕವೆಂಬಂತೆ ೧೯೭೦-೭೧ರ ಅವಧಿಯಲ್ಲಿ ಕೇಂದ್ರ ಪುರಾತತ್ವ ಇಲಾಖೆಯ ಪುರಾತತ್ವಜ್ಞ ಸಿ. ಕೃಷ್ಣಮೂರ್ತಿ ಅವರು ದೇವನಹಳ್ಳಿಯ ರಸ್ತೆಯಲ್ಲಿರುವ ಮನಗೊಂಡನಹಳ್ಳಿಯ ಪ್ರದೇಶದಲ್ಲಿ ಅಂತ್ಯ ಹಳೆಶಿಲಾಯುಗ ಕಾಲದ ಅಲಗುಗಳಂತಿರುವ ಕೆಲವು ಶಿಲಾಯುಧಗಳನ್ನು ಶೋಧಿಸಿದ್ದಾರೆ. ಸುಮಾರು ಒಂದು ಲಕ್ಷ ವರ್ಷಗಳ

ಪುರಾತನವಾದ ಈ ಶಿಲಾಯುಧಗಳು ಬೆಂಗಳೂರು ಪರಿಸರದಲ್ಲಿ ದೊರೆತ ಅತ್ಯಂತ ಪುರಾತನ ಶಿಲಾಯುಧಗಳಾಗಿದ್ದು, ಈ ಬಗ್ಗೆ ಇನ್ನೂ ಹೆಚ್ಚಿನ ಅನ್ವೇಷಣೆ ಹಾಗೂ ವೈಜ್ಞಾನಿಕ ಅಧ್ಯಯನಗಳ ಅವಶ್ಯಕತೆ ಇದೆ. ಆದರೂ ಈ ಸುಳಿವು ಅತ್ಯಂತ ಮಹತ್ವದ್ದಾಗಿದ್ದು, ಬೆಂಗಳೂರು ಪರಿಸರದಲ್ಲಿಯೂ ಹಳೆಶಿಲಾಯುಗ ಸಂಸ್ಕೃತಿಯ ಅಸ್ತಿತ್ವ ಗುರುತಿಸುವ ಒಂದು ಆಶಾಕಿರಣದಂತೆ ಕಾಣುತ್ತದೆ.

**ಸೂಕ್ಷ್ಮಶಿಲಾಯುಗ ಸಂಸ್ಕೃತಿ (ಸು. ೧೦,೦೦೦ ವರ್ಷಗಳಷ್ಟು ಪುರಾತನ)**

ಹೆಸರಾಂತ ಪುರಾತತ್ವಜ್ಞ ಎಂ. ಶೇಷಾದ್ರಿಯವರು ಮೈಸೂರು ಪ್ರಾಂತ್ಯದ ಶಿಲಾಯುಗ ಸಂಸ್ಕೃತಿಗಳ ಕುರಿತು ತಮ್ಮ ಸಂಶೋಧನಾ ಪ್ರಬಂಧದಲ್ಲಿ ಬೆಂಗಳೂರು ಪರಿಸರದಲ್ಲಿ ದೊರೆತ ಸೂಕ್ಷ್ಮಶಿಲಾಯುಗದ ಅವಶೇಷಗಳು ಈ ಸಂಸ್ಕೃತಿಯ ಅತ್ಯಂತ ಪ್ರಾಚೀನ ಅವಶೇಷಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ದೊರೆತ ಅವಶೇಷಗಳನ್ನು ಆಧರಿಸಿ ಬೇಟೆಯೊಂದಿಗೆ 'ಆಹಾರ ಸಂಗ್ರಹಿಸುವ ಪದ್ಧತಿ' [*Food Gathering stage to Food Producing stage*]ಯನ್ನೂ ಅನುಸರಿಸುತ್ತಾ ಅಲೆಮಾರಿ ಜೀವನ ನಡೆಸುವ ಮಾನವರು ಈ ಪರಿಸರದಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಕಾಲದಲ್ಲಿ ವಾಸವಾಗಿದ್ದರೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ (Seshadri 1956:34). ಬೆಂಗಳೂರು ಪರಿಸರದಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಹಲವು ನೆಲೆಗಳನ್ನು ಶೋಧಿಸಲಾಗಿದೆ. ರೇಸ್‌ಕೋರ್ಸ್, ಬಸವನಗುಡಿ, ಸೂಡಸಂದ್ರ, ಸಿದ್ದಾಪುರ, ಸರ್ಜಾಪುರ ರಸ್ತೆ, ರಾಗಿಗುಡ್ಡ, ಜಾಲಹಳ್ಳಿ, ದೇವನಹಳ್ಳಿ, ಇತ್ಯಾದಿ ಪ್ರದೇಶಗಳಲ್ಲಿ ಸೂಕ್ಷ್ಮಶಿಲಾಯುಗದ ಅವಶೇಷಗಳು ದೊರೆತ ವರದಿಗಳಿವೆ. ಇವುಗಳಲ್ಲಿ ಜಾಲಹಳ್ಳಿಯಲ್ಲಿ ಅತ್ಯಂತ ವೈಜ್ಞಾನಿಕವಾಗಿ ಅಧ್ಯಯನ ಕೈಕೊಳ್ಳಲಾಗಿದೆ. ೧೯೪೫ರಲ್ಲಿ ಪುರಾತತ್ವಜ್ಞ ಕೆ.ಆರ್.ಯು. ಟಾಡ್ ಅವರು ಒಂದು ಚಿಕ್ಕ ಉತ್ಖನನ ಕೈಕೊಂಡು ಸೂಕ್ಷ್ಮಶಿಲಾಯುಧಗಳು ಭೂಮಿಯ ಆಳದಲ್ಲಿ ದೊರಕುವ ವಿಧಾನವನ್ನು ಆಧರಿಸಿ ಅವುಗಳ ಕಾಲನಿರ್ಣಯ ಮಾಡಿದ್ದಾರೆ.




೧೯೪೫ರಲ್ಲಿ ಕೆ.ಆರ್.ಯು. ಟಾಡ್ ಅವರು ಜಾಲಹಳ್ಳಿ ಬಳಿ ಕೈಗೊಂಡ ಉತ್ಖನನ ನೋಟ

[ಕೃಪೆ : Todd 1948

ಜಾಲಹಳ್ಳಿ ಮತ್ತು ಇತರೆಡೆಗಳಲ್ಲಿ ದೊರೆತ ಸೂಕ್ಷ್ಮಶಿಲಾಯುಗದ ಆಯುಧಗಳು ಆಕ್ಸ್‌ಫರ್ಡ್ ಹಾಗೂ ಬ್ರಿಟಿಷ್ ಮ್ಯೂಸಿಯಮ್‌ಗಳ ಸಂಗ್ರಹದಲ್ಲಿವೆ. ಈ ಸಂಗ್ರಹದ ಶಿಲಾಯುಧಗಳನ್ನು ಎಂ. ಶೇಷಾದ್ರಿ ಅವರು ವಿಶೇಷ ಅಧ್ಯಯನ ಕೈಕೊಂಡು ವಿವರವಾದ ಮಾಹಿತಿ ನೀಡಿದ್ದಾರೆ. ಸುಮಾರು ಹತ್ತು ಸಾವಿರ ವರ್ಷಗಳ ಹಿಂದೆ ಹಿಮಯುಗ ಕೊನೆಗೊಂಡು ಹವಾಮಾನ ಹಿತಕರವಾಯಿತು. ಭೂಭಾಗವನ್ನು ಆವರಿಸಿದ ಹಿಮಗೆಡ್ಡೆಗಳು ಕರಗಿ ಸಮುದ್ರಮಟ್ಟಗಳು ಹೆಚ್ಚಾದವು. ಜೌಗು ಭೂಭಾಗಗಳು ಹೆಚ್ಚು ಫಲವತ್ತಾಗಿ ದಟ್ಟ ಅರಣ್ಯಗಳು ಸೃಷ್ಟಿಯಾದವು. ಈ ಮಾರ್ಪಾಡುಗಳು ಮಾನವನ ಜೀವನ ಕ್ರಮದ ಮೇಲೆ ಅಗಾಧ ಪರಿಣಾಮ ಬೀರಿದವು. ಮಾನವರು ತಮ್ಮ ಜೀವನ ಕ್ರಮಕ್ಕಾಗಿ ಆಹಾರ ಸಂಗ್ರಹಣೆಯಂತಹ ತಂತ್ರಗಳನ್ನು ಅನುಸರಿಸಲಾರಂಭಿಸಿದರು. ಬೇಟೆಗಾಗಿ ಕಲ್ಲಿನಲ್ಲಿ ತಯಾರಿಸಿದ ಚಿಕ್ಕ ಗಾತ್ರದ ಆಯುಧಗಳಾದ ಬಾಣ, ಬರ್ಜಿ, ಅಲಗು(ಬ್ಲೇಡ್)ಗಳನ್ನು ತಯಾರಿಸಿ ಬಳಸುವ ಪದ್ಧತಿ ಅನುಸರಿಸಿದರು.



ಜಾಲಹಳ್ಳಿ ಉತ್ಖನನದಲ್ಲಿ ದೊರೆತ ಸೂಕ್ಷ್ಮಶಿಲಾಯುಗದ ಶಿಲಾ ಆಯುಧಗಳು

[ಕೃಪೆ : **Seshadri 1956**]

ನಾಯಿ, ಮೇಕೆಗಳಂತಹ ಚಿಕ್ಕ ಪ್ರಾಣಿಗಳನ್ನು ಸಾಕುಪ್ರಾಣಿಗಳನ್ನಾಗಿ ಪಳಗಿಸಿ ಅವುಗಳನ್ನು ಬಳಸಿಕೊಂಡು ಆಹಾರ ಬೇಟೆಗೆ ಅಥವಾ ದೂರದ ಪ್ರದೇಶಗಳಿಗೆ ಅಲೆದಾಡುವ ಸಂಪ್ರದಾಯ ಪ್ರಾರಂಭವಾಯಿತು. ಆಹಾರ ಹುಡುಕುವುದಕ್ಕಾಗಿ ಪ್ರದೇಶದಿಂದ ಪ್ರದೇಶಗಳಿಗೆ ನಿರಂತರ ಅಲೆದಾಡುತ್ತಿದ್ದರಿಂದ ಒಂದೇ ಕಡೆ ಖಾಯಂ ಆಗಿ ನೆಲೆಸಿರುವ ಉದಾಹರಣೆ ಕಡಿಮೆ. ಆ ಕಾರಣಕ್ಕಾಗಿ ಸೂಕ್ಷ್ಮಶಿಲಾಯುಗದ ಆಯುಧಗಳು ಅನೇಕ ಸ್ಥಳಗಳಲ್ಲಿ ದೊರಕುವುದನ್ನು



ಇಟ್ಟಿಗೆಬೈಲು ಪ್ರದೇಶದಲ್ಲಿ ದೊರೆತ ಸಿಲಿಂಡರ್ ಆಕಾರದ ಶವ ಹೂತಿಡುವ ಮಡಕೆ

[ಕೃಪೆ : **Branfill 1881**]

ಕಾಣಬಹುದು. ಬೆಂಗಳೂರಿನ ಪರಿಸರದಲ್ಲಿ ಐದಕ್ಕೂ ಹೆಚ್ಚು ಸ್ಥಳಗಳಲ್ಲಿ ದೊರಕಿದ ವರದಿಗಳಿವೆ. ನೈಸರ್ಗಿಕ ಗವಿಗಳಲ್ಲಿ ವಾಸ ಮಾಡುತ್ತಾ ಅರಣ್ಯಗಳಲ್ಲಿ ನಡೆಸುತ್ತಿದ್ದ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಮಾನವರ ಜೀವನಕ್ರಮವು ಬೆಂಗಳೂರು ಪರಿಸರದಲ್ಲಿ ಸುಮಾರು ಹತ್ತು ಸಾವಿರ ವರ್ಷಗಳ ಹಿಂದಿನ ಕಾಲಾವಧಿಯಿಂದಲೇ ಆರಂಭವಾಗಿತ್ತೆಂದು ಗುರುತಿಸಬಹುದು. ಮರದ ಅಥವಾ ಪ್ರಾಣಿ ಮೂಳೆಗಳ ಹಿಡಿಕೆಗಳನ್ನು ಬಳಸಿ ಮಾಡಿದ ಚಿಕ್ಕ ಗಾತ್ರದ ಶಿಲಾಯುಧಗಳು ಹೆಚ್.ಎ.ಎಲ್. ಬಯಲಿನಲ್ಲಿ ಹಾಗೂ ಸರ್ಜಾಪುರ ರಸ್ತೆಯ ಸಮೀಪದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ. ಆ ಕಾರಣಕ್ಕಾಗಿ ಈ ಸಂಸ್ಕೃತಿಯ

ಜನರು ಚಿಕ್ಕ ಪ್ರಮಾಣದ ಕೃಷಿ ಪದ್ಧತಿಯನ್ನು ಪ್ರಾರಂಭಿಸಿರುವ ಸಾಧ್ಯತೆಗಳಿವೆ ಎಂಬ ಅಭಿಪ್ರಾಯವನ್ನು ಎಂ. ಶೇಷಾದ್ರಿಯವರು ವ್ಯಕ್ತಪಡಿಸಿದ್ದಾರೆ (Seshadri 1956:34). ಒಟ್ಟಿನಲ್ಲಿ ಬೆಂಗಳೂರು ಪರಿಸರದಲ್ಲಿ ಬೇಟೆ ಮಾಡುತ್ತ 'ಆಹಾರ ಸಂಗ್ರಹಣೆ' ಪದ್ಧತಿ ಅನುಸರಿಸುವ ಜೀವನ ಕ್ರಮದ ಸಂಸ್ಕೃತಿ ಪ್ರಾರಂಭಿಸಿ ಕೃಷಿ ಮಾಡುವ ಕಲೆ ಕಲಿತು 'ಆಹಾರ ಉತ್ಪಾದಿಸುವ' ಕ್ರಮವನ್ನು ಅನುಸರಿಸುವ ಬಹುಮುಖ್ಯವಾದ ಸಂಸ್ಕೃತಿಯ ಘಟ್ಟವನ್ನು ಇಲ್ಲಿ ಕಾಣುತ್ತೇವೆ.

**ನವಶಿಲಾಯುಗ (ಸು. ೫೦೦೦ ವರ್ಷಗಳಷ್ಟು ಪುರಾತನ)**

ಕಪ್ಪುಶಿಲೆಯಲ್ಲಿ ನಯಗೊಳಿಸಿ ಕೊಡಲಿಗಳನ್ನು ತಯಾರಿಸಿ ದಟ್ಟ ಅರಣ್ಯಗಳಿರುವ ಮರಗಳನ್ನು ಕಡಿದು ಕೃಷಿಯೋಗ್ಯವಾದ ಭೂಮಿಯನ್ನಾಗಿ ಮಾಡಿ ದವಸ ಧಾನ್ಯಗಳನ್ನು ಬೆಳೆಯುವ ಕಸುಬನ್ನು ಅನುಸರಿಸುವ ನವಶಿಲಾಯುಗದ ಸಂಸ್ಕೃತಿಯು ಬೆಂಗಳೂರಿನ ಪರಿಸರದಲ್ಲಿ ಪ್ರಚಲಿತದಲ್ಲಿತ್ತು. ಕೃಷಿ ಪದ್ಧತಿಯನ್ನು ಅನುಸರಿಸುತ್ತಿದ್ದರಿಂದ ಒಂದು ಕಡೆ ನೆಲೆಯೂರಿದ ಉದಾಹರಣೆಗಳಿವೆ. ಪಶುಸಂಗೋಪನೆ ಕೂಡ ರೂಢಿಯಲ್ಲಿತ್ತು. ಇದರಿಂದಾಗಿ ಗ್ರಾಮೀಣ ಜೀವನಕ್ರಮವು ಉಗಮಗೊಂಡು ಸಂಸ್ಕೃತಿ ಬೆಳೆಯಲಾರಂಭಿಸಿತು. ಬೆಂಗಳೂರಿನ ಪರಿಸರದಲ್ಲಿ ಮುತ್ಯಾಲಮಡು ಹಾಗೂ ಕೂನಗಲ್ ಪ್ರದೇಶಗಳಲ್ಲಿ ಮಾತ್ರ ನವಶಿಲಾಯುಗದ ಕಲ್ಲಿನ ಆಯುಧಗಳು ದೊರಕಿದ ವರದಿಗಳಿವೆ (*IAR* 1975-76:101 ಹಾಗೂ ಭೈರೇಗೌಡ ೨೦೦೨). ಇವೆರಡು ನೆಲೆಗಳು ವೃಷಭಾವತಿ ಹಾಗೂ ಅರ್ಕಾವತಿ ನದಿಗಳ ಬಯಲಿನಲ್ಲಿ ಕಂಡುಬಂದಿರುವುದು ಗಮನಾರ್ಹ. ಬೆಂಗಳೂರು ಪರಿಸರದಲ್ಲಿ ಮತ್ತು ಪಕ್ಕದ ತುಮಕೂರು ಹಾಗೂ ಕೋಲಾರ ಜಿಲ್ಲೆಗಳಲ್ಲಿ ಹಲವಾರು ನವಶಿಲಾಯುಗದ ನೆಲೆಗಳು ದೊರಕಿದ ವರದಿಗಳಿವೆ. ಅದರಂತೆ ಇದೇ ಸಂಸ್ಕೃತಿಗೆ ಸೇರುವ ಬೂದಿದಿಣ್ಣೆಗಳು ದೊರೆತಿರುವ ವರದಿಗಳು ತುಮಕೂರು ಜಿಲ್ಲೆಯ ಗಂಗದನಹಳ್ಳಿ ಹೆರೂರು ಗ್ರಾಮದ ಹತ್ತಿರದ ಬೂದಿದಿಣ್ಣೆಯಲ್ಲಿ ದೊರಕಿವೆ (*IAR* 1980-81:92). ಅಲ್ಲದೆ ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲೂಕಿನ ಬೂದಿಕೋಟೆ ಮತ್ತು ಬನಹಳ್ಳಿಯಲ್ಲಿಯೂ ನವಶಿಲಾಯುಗದ ಅವಶೇಷಗಳು ದೊರಕಿವೆ. ಅದೇರೀತಿ ಪಕ್ಕದ ರಾಮನಗರ ಹಾಗೂ ಮಂಡ್ಯ ಜಿಲ್ಲೆಗಳಲ್ಲಿಯೂ ನವಶಿಲಾಯುಗದ ಅವಶೇಷಗಳು ದೊರೆತಿದ್ದು, ಬೆಂಗಳೂರು ಪರಿಸರದಲ್ಲಿಯೂ ನವಶಿಲಾಯುಗ ಸಂಸ್ಕೃತಿಯು ಸಮೃದ್ಧಿಯಾಗಿ ಬೆಳೆದಿತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ನಿಟ್ಟಿನಲ್ಲಿ ಬೆಂಗಳೂರು ಪರಿಸರದಲ್ಲಿ ಹೆಚ್ಚು ವೈಜ್ಞಾನಿಕ ಹಾಗೂ ವ್ಯವಸ್ಥಿತ ಅಧ್ಯಯನದ ಅವಶ್ಯಕತೆ ಇದೆ. ಆ ಮೂಲಕ ಸೂಕ್ಷ್ಮಶಿಲಾಯುಗ ಹಾಗೂ ಕಬ್ಬಿಣಯುಗ ಸಂಸ್ಕೃತಿಗಳೆರಡರ ನಡುವಿನ ನವಶಿಲಾಯುಗ ಸಂಸ್ಕೃತಿಯ ಚರಿತ್ರೆ ರಚಿಸಬಹುದು.

**ನವಶಿಲಾ-ತಾಮ್ರಯುಗ ಸಂಸ್ಕೃತಿ (ಕ್ರಿಪೂ. ೧೮೦೦-೧೪೦೦)**

ತಮಿಳುನಾಡು ಒಳಗೊಂಡಂತೆ ಕಾವೇರಿ ಸೀಮೆಯಲ್ಲಿ ನವಶಿಲಾಯುಗ ಸಂಸ್ಕೃತಿಯು ನೇರವಾಗಿ ಕಬ್ಬಿಣಯುಗ ಸಂಸ್ಕೃತಿಯುಗಕ್ಕೆ ಕಾಲಿರಿಸಿದರು ಎಂಬ ವಾದ ವಿದ್ವಾಂಸರಲ್ಲಿದೆ. ಆ ಕಾರಣಕ್ಕಾಗಿ ತಾಮ್ರದ ಉಪಕರಣಗಳು ಅವಶೇಷಗಳು ತಮಿಳುನಾಡಿನ ಅಥವಾ ಕಾವೇರಿ ಸೀಮೆಯ ನವಶಿಲಾಯುಗದ ಉತ್ಖನನಗಳಲ್ಲಿ ದೊರಕಿದ ಉದಾಹರಣೆಗಳಿಲ್ಲ. ಆದರೆ ತುಂಗಾಭದ್ರ ನದಿ ಅಥವಾ ಡೆಕ್ಕನ್ ಪ್ರದೇಶದಲ್ಲಿ ನವಶಿಲಾಯುಗ ಸಂಸ್ಕೃತಿಯ ಅಂತ್ಯಕಾಲಾವಧಿಯಲ್ಲಿ ತಾಮ್ರದ ಬಳಕೆ ಮಾಡಿದ್ದರು ಎನ್ನುವುದಕ್ಕೆ ಇದುವರೆಗೆ ನಡೆದ

ಅನೇಕ ಉತ್ಖನನಗಳಲ್ಲಿ ದೊರೆತಿರುವ ಅವಶೇಷಗಳೇ ಸಾಕ್ಷಿ. ಪುರಾತತ್ವ ಇಲಾಖೆಯ ಮದ್ರಾಸ್ ವಲಯದ ಮುಖ್ಯಸ್ಥರಾಗಿದ್ದ ಸೌಂದರರಾಜನ್ ಹಾಗೂ ಅವರ ತಂಡದವರು ಕೋಲಾರ ಜಿಲ್ಲೆಯ ಬನಹಳ್ಳಿಯಲ್ಲಿ ಉತ್ಖನನಗಳನ್ನು ಕೈಕೊಂಡು ತಾಮ್ರಯುಗದ ಅವಶೇಷಗಳ ಶೋಧನೆ ನಡೆಸಿದರು (*IAR* 1973-74; ಮತ್ತು Krishnamurthy 1990: 67-84). ಬನಹಳ್ಳಿ ಉತ್ಖನನಗಳಲ್ಲಿಯೂ ಕೆಲವು ತಾಮ್ರದ ಆಯುಧಗಳು ದೊರಕಿದ್ದು ಕೋಲಾರ ಒಳಗೊಂಡಂತೆ ದಕ್ಷಿಣ ಪಿನಾಕಿನಿ ನದಿಯ ಬಯಲಿನವರೆಗೂ ತಾಮ್ರಯುಗದ ಸಂಸ್ಕೃತಿ ಹರಡಿಕೊಂಡಿತ್ತು ಎಂಬುದು ದೃಢಪಟ್ಟಿತು. ಪಕ್ಕದ ಬೆಂಗಳೂರು ಪರಿಸರದಲ್ಲಿಯೂ ನವಶಿಲಾ–ತಾಮ್ರಯುಗದ ಸಂಸ್ಕೃತಿಯು ಪ್ರಚಲಿತದಲ್ಲಿತ್ತೆಂದು ಸ್ಪಷ್ಟವಾಗಿ ಗುರುತಿಸಬಹುದು.

**ಕಬ್ಬಿಣಯುಗ ಸಂಸ್ಕೃತಿ (ಕ್ರಿಪೂ. ೧೨೦೦ ರಿಂದ ಕ್ರಿಶ. ೨೦೦ರವರೆಗೆ)**

ದಕ್ಷಿಣ ಭಾರತದಲ್ಲಿ ಕಬ್ಬಿಣ ಲೋಹದ ಆವಿಷ್ಕಾರವಾಗುತ್ತಿದ್ದಂತೆ ಸಂಘಟಿತ ಸಮಾಜ ರೂಪುಗೊಂಡು ಅನೇಕ ಪ್ರದೇಶಗಳಲ್ಲಿ ನೆಲೆಯೂರಿ ಬೃಹತ್ ಸಂಸ್ಕೃತಿಯನ್ನು ಬೆಳೆಸಿದರು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಲೋಹಗಳಲ್ಲಿಯೇ ಹೆಚ್ಚು ಗಟ್ಟಿ ಹಾಗೂ ಹೇರಳವಾಗಿ ಸಿಗುವ ಕಬ್ಬಿಣ ಲೋಹವನ್ನು ಕಂಡುಕೊಂಡ ಮಾನವ ಅದನ್ನು ಕೃಷಿಗೆ ಬಳಸಿಕೊಂಡ. ಇದರಿಂದ ಭೂಮಿಯ ಉಳಿಮೆಗೆ ಹೆಚ್ಚಿನ ಬಲ ಹಾಗೂ ಸಹಾಯ ದೊರೆತಂತಾಯಿತು. ಮರ ಅಥವಾ ಮೂಳೆಗಳನ್ನು ಬಳಸಿಕೊಂಡು ಉಳುಮೆ ಮಾಡುತ್ತಿದ್ದ ಕೃಷಿಕರಲ್ಲಿ ಭೂಮಿಯ ಆಳಕ್ಕೆ ನೇಗಿಲನ್ನು ಬಳಸುವ ಸಾಮರ್ಥ್ಯ ಕಡಿಮೆಯಾಗಿತ್ತು. ಗಟ್ಟಿ ಲೋಹವಾದ ಕಬ್ಬಿಣದಿಂದ ತಯಾರಿಸಿದ ಕೃಷಿ ಉಪಕರಣಗಳ ಬಳಕೆಯ ಆರಂಭದೊಂದಿಗೆ ಕೃಷಿ ಉತ್ಪಾದನೆ ಇಮ್ಮಡಿಸಿತು. ಇದರಿಂದಾಗಿ ಸಮಾಜದಲ್ಲಿ ಬದಲಾವಣೆಗಳು ಮೂಡತೊಡಗಿದವು. ಕೃಷಿಗೆ ಪೂರಕವಾಗುವ ವರ್ಗಗಳಾದ ಕಮ್ಮಾರರು, ಬಡಗಿಗಳು, ಗಣಿಗಾರಿಕೆ ಕಾರ್ಮಿಕರು ಇತ್ಯಾದಿ ಕೃಷಿಯೇತರ ಶ್ರಮಜೀವಿಗಳ ಪಂಗಡ ಉದಯವಾಯಿತು. ಗ್ರಾಮ್ಯ ಜೀವನಶೈಲಿಯ ಹಳ್ಳಿಗಳು ಉಗಮಗೊಂಡು ಪೂರ್ಣಪ್ರಮಾಣದ ಗ್ರಾಮೀಣ ಸಂಸ್ಕೃತಿ ಬೆಳೆಯಿತು. ಕಬ್ಬಿಣ ಲೋಹಗಾರಿಕೆಗೆ ಹೆಚ್ಚಿನ ಮಹತ್ವ ದೊರೆಯಿತು. ದಕ್ಷಿಣ ಭಾರತದ ಕಬ್ಬಿಣಯುಗ ಸಂಸ್ಕೃತಿಯ ಕಾಲದಲ್ಲಿ ಬೃಹದಾಕಾರದ ಶಿಲಾಗೋರಿಗಳು ಅಪಾರ ಸಂಖ್ಯೆಯಲ್ಲಿ ನಿರ್ಮಾಣವಾಗಿರುವುದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಗೋರಿ ಸಂಸ್ಕೃತಿ ಅಥವಾ ಬೃಹತ್ ಶಿಲಾಸಮಾಧಿ ಯುಗ *(Megalitic Culture)* ಸಂಸ್ಕೃತಿಯೆಂಬ ಪರ್ಯಾಯ ಹೆಸರಿನಲ್ಲಿಯೂ ಕರೆಯಲಾಗುತ್ತದೆ. ಪುನರ್ಜನ್ಮದ ಕಲ್ಪನೆಯುಳ್ಳ ಸಮಾಜವನ್ನು ಈ ಯುಗದ ಸಂಸ್ಕೃತಿಯಲ್ಲಿ ಕಾಣುತ್ತೇವೆ. ಮರಣ ಹೊಂದಿದವರ ಮುಂದಿನ ಜನ್ಮಕ್ಕೆ ಉಪಯೋಗವಾಗಲಿ ಎಂಬ ಉದ್ದೇಶದಿಂದ ಸಮಾಧಿಯಲ್ಲಿ ಶವದೊಂದಿಗೆ ಮಣ್ಣಿನ ಪಾತ್ರೆಗಳು, ಆಭರಣಗಳು, ಇತ್ಯಾದಿಗಳನ್ನು ವ್ಯವಸ್ಥಿತವಾಗಿ ಜೋಡಿಸಿಡುವ ಆಚರಣೆಗಳಿದ್ದವು ಎಂಬುದು ಸಮಾಧಿಗಳನ್ನು ಪರೀಕ್ಷಿಸಿದಾಗ ಗೋಚರವಾಗುತ್ತದೆ. ಇನ್ನೂ ಅನೇಕ ಕಡೆ ಸಮಾಧಿಗಳು ಕೇವಲ ಸಾಂಕೇತಿಕವಾಗಿರುತ್ತವೆ. ಯಾವುದೇ ಅಸ್ಥಿಪಂಜರಗಳಿರುವುದಿಲ್ಲ. ಈ ಕಾಲದ ಕಲ್ಗೋರಿಗಳು ಅನೇಕ ವಿಧಗಳಲ್ಲಿ ರಚನೆಯಾಗಿದ್ದು ವಿದ್ವಾಂಸರು ಅವುಗಳ ವರ್ಗೀಕರಣ, ನಿರ್ಮಾಣದ ವಿಧಾನಗಳು ಇತ್ಯಾದಿ ವಿಷಯಗಳನ್ನು ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಕಬ್ಬಿಣಯುಗದ ಕಾಲದಲ್ಲಿ

ಸಂಘಟಿತ ಸಮಾಜ ರೂಪುಗೊಂಡು, ಶ್ರೇಣಿಯುಕ್ತ ಸಾಮಾಜಿಕ ಜೀವನ ಪದ್ಧತಿ ಉಗಮಗೊಂಡಿತು. ಕೃಷಿ ಹಾಗೂ ಕೃಷಿಯೇತರ ಸಮಾಜ ಈ ಕಾಲದಲ್ಲಿ ಸ್ಪಷ್ಟವಾಗತೊಡಗಿತು. ಮಡಕೆ ತಯಾರಿಕೆಯಲ್ಲಿ ಹಾಗೂ ವಾಸ್ತು ನಿರ್ಮಾಣ ಪದ್ಧತಿಗಳಲ್ಲಿ ಬಹಳ ಮುಂದುವರೆದ ತಂತ್ರಜ್ಞಾನ ಈ ಯುಗದ ಸಂಸ್ಕೃತಿಯಲ್ಲಿ ಗುರುತಿಸಬಹುದಾದ ಪ್ರಮುಖ ಲಕ್ಷಣ.

ಬೆಂಗಳೂರು ಪರಿಸರದಲ್ಲಿ ಕಬ್ಬಿಣಯುಗದ ಬೃಹತ್ ಶಿಲಾಗೋರಿಗಳು ಅಸಂಖ್ಯವಾಗಿ ದೊರಕಿವೆ. ಮೂಲತಃ ಬೆಟ್ಟಗುಡ್ಡಗಳ, ಮುಖ್ಯ ಹಾಗೂ ಉಪ ಕಣಿವೆಗಳಿಂದ ಕೂಡಿದ ಈ ಪ್ರದೇಶದಲ್ಲಿ ಕಬ್ಬಿಣ ಯುಗದ ಸಂಸ್ಕೃತಿಗೆ ಪೂರಕವಾದ ವಾತಾವರಣ ಇದೆ. ಆ ಕಾರಣಕ್ಕಾಗಿ ಅಸಂಖ್ಯ ಬೃಹತ್ ಶಿಲಾಗೋರಿಗಳು ಇಲ್ಲಿ ದೊರಕಿವೆ. ಈ ಪರಿಸರದಲ್ಲಿ ಸುಮಾರು ೫೦ಕ್ಕೂ ಹೆಚ್ಚು ಸ್ಥಳಗಳಲ್ಲಿ ಕಬ್ಬಿಣಯುಗದ ಬೃಹತ್ ಶಿಲಾಗೋರಿಗಳ ಅವಶೇಷಗಳನ್ನು ಶೋಧಿಸಲಾಗಿದೆ. ಇವುಗಳಲ್ಲಿ ಜಡಿಗೇನಹಳ್ಳಿ, ಮನಗೊಂಡನಹಳ್ಳಿ, ಬೆಳ್ಳಂದೂರು ಹಾಗೂ ಇಟ್ಟಿಗೆಬ್ಬೈಲು (ಸಾವನದುರ್ಗ) ನೆಲೆಗಳಲ್ಲಿ ಮಾತ್ರ ಪೂರ್ಣಪ್ರಮಾಣದ ಉತ್ಖನನಗಳನ್ನು ವಿದ್ವಾಂಸರು ಕೈಗೊಂಡಿದ್ದಾರೆ. ದೊರೆತ ಅವಶೇಷಗಳಿಂದ ಕಬ್ಬಿಣಯುಗದ ಸಂಸ್ಕೃತಿಯ ಚರಿತ್ರೆಯನ್ನು ಕಟ್ಟಬಹುದು.

ಅರ್ಕಾವತಿ ಕಣಿವೆಯ ಸಾವನದುರ್ಗದ ಇಟ್ಟಿಗೆಬ್ಬೈಲು ಹಾಗೂ ಪಿನಾಕಿನಿ ಕಣಿವೆಯ ಜಡಿಗೇನಹಳ್ಳಿ ನೆಲೆಗಳಲ್ಲಿ ಒಳ್ಳೆಯ ಉತ್ಖನನಗಳು ನಡೆದ ಪ್ರಯುಕ್ತ ಅಲ್ಲಿಯ ಅವಶೇಷಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿವೆ. ೧೮೭೮ ಜುಲೈ ಹಾಗೂ ಆಗಸ್ಟ್ ತಿಂಗಳುಗಳಲ್ಲಿ ಬಿ.ಆರ್. ಬ್ರಾನ್‌ಫಿಲ್ ಅವರು ಇಟ್ಟಿಗೆಬ್ಬೈಲು ಪ್ರದೇಶದಲ್ಲಿ ಹರಡಿಕೊಂಡಿದ್ದ ಕಬ್ಬಿಣಯುಗಕ್ಕೆ ಸೇರಿದ ಬೃಹತ್ ಶಿಲಾಗೋರಿಗಳನ್ನು ಉತ್ಖನನ ಮಾಡಿದರು. ಈ ಉತ್ಖನನ ವರದಿಯಲ್ಲಿ ತಮಗೆ ದೊರೆತ ಅವಶೇಷಗಳನ್ನು ರೇಖಾಚಿತ್ರಗಳ ಸಹಿತ ಪ್ರಕಟಿಸಿದ್ದಾರೆ (Branfill 1881). ಈ ಗೋರಿಗಳಲ್ಲಿ ಶವದ ಕಳೆಬರವನ್ನು ಹೂತಿಡಲು ಸಿಲಿಂಡರ್ ಆಕಾರದ ದೊಡ್ಡ ಗಾತ್ರದ ಮಡಕೆಗಳನ್ನು ಬಳಸಲಾಗಿದೆ.

ಈ ಮಡಕೆಗಳಿಗೆ ತಳಭಾಗದಲ್ಲಿ ಚಿಕ್ಕದಾದ ಮೂರು ಕಾಲುಗಳನ್ನು ಮಾಡಲಾಗಿದೆ. ಗುಂಡಿಗಳಲ್ಲಿ ಭದ್ರವಾಗಿ ನೆಲೆಗೊಳಿಸುವ ಉದ್ದೇಶದಿಂದ ಕಾಲುಗಳುಳ್ಳ ಸಿಲಿಂಡರ್ ಆಕಾರದ ಮಡಕೆಗಳನ್ನು ರಚಿಸುತ್ತಿದ್ದರು. ಈ ಮಾದರಿಯ ಮಡಕೆಗಳು ಕಾವೇರಿ ಸೀಮೆ ಹಾಗೂ ತಮಿಳುನಾಡಿನ ಪಾಲಾರ ನದಿ ಕಣಿವೆಯ ಕಬ್ಬಿಣಯುಗದ ಶಿಲಾಗೋರಿ ಸಂಸ್ಕೃತಿಯಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಇದೇ ನೆಲೆಯ ಉತ್ಖನನದಲ್ಲಿ ಎರಡು ಬಗೆಯ ಬಹಳ ಅಪರೂಪದ ಮಡಕೆಗಳು ದೊರಕಿವೆ. ಪಸುಪಿನ ಕೊಂಬುಗಳ ರೂಪದ ಹೂಜಿಗಳು ದೊರಕಿವೆ.



ಇಟ್ಟಿಗೆಬ್ಬೈಲು ಪ್ರದೇಶದಲ್ಲಿ ದೊರೆತ ಸಿಲಿಂಡರ್ ಆಕಾರದ ಕಾಲ ಹೊತ್ತಿರುವ ಮಡಕೆ [ಕೃಪೆ : Branfill 1881]



ಇಟ್ಟಿಗೆಬೈಲು ಪ್ರದೇಶದಲ್ಲಿ ದೊರೆತ ಕೊಂಬಿನ ರೂಪದ ಮಡಕೆಗಳು
[ಕೃಪೆ : Branfill 1881]

ಇವುಗಳು ಪೈಪುಗಳ ಮಾದರಿಯಲ್ಲಿದ್ದು ತಳಭಾಗವು ಸಮತಟ್ಟಾಗಿದೆ. ಮೇಲ್ಭಾಗಗಳಲ್ಲಿ ಚಿಕ್ಕ ರಂಧ್ರಗಳಿವೆ.

ಉತ್ಖನನ ಕೈಗೊಂಡ ಬ್ರಾನ್‌ಫಿಲ್ ಅವರು ಅಮರಾವತಿಯ ಬೌದ್ಧ ಜಾತಕ ಶಿಲ್ಪವಾದ ಸಿಬಿ ಜಾತಕ ಶಿಲ್ಪಗಳಲ್ಲಿ ರಾಜನ ಅರಮನೆಯ ಸೇವಕನ ಹೆಗಲ ಮೇಲೆ ಈ ಮಾದರಿಯ ಹೂಜಿಗಳಿರುವುದನ್ನು ಗಮನಿಸಿ, ಇವುಗಳ ಬಳಕೆಯ ವಿಧಾನವನ್ನು ಹೋಲಿಕೆ ಮಾಡಿ ವಿವರಿಸಿದ್ದಾನೆ. ಜೇನು ಅಥವಾ ದ್ರವರೂಪದ ಪದಾರ್ಥಗಳನ್ನು ಶೇಖರಿಸಿಡಲು ತಯಾರಿಸಿದ ಮಣ್ಣಿನ ವಸ್ತುಗಳು ಇವಾಗಿವೆ. ಇಂತಹ ಹೂಜಿಯ ಬಳಕೆಯನ್ನು ಚರಿತ್ರೆಯ ಆರಂಭ ಕಾಲದ ಚಿತ್ರಕಲೆ ಹಾಗೂ ಶಿಲ್ಪಕಲೆಯಲ್ಲಿ ಗುರುತಿಸಬಹುದಾಗಿದ್ದು, ಬಹಳ ಅಪರೂಪದ ಹೂಜಿಗಳು ಇವಾಗಿವೆ (Branfill 1881: Fig.29).

ಇಟ್ಟಿಗೆಬೈಲು ಉತ್ಖನನದಲ್ಲಿ ದೊರೆತ ಮತ್ತೊಂದು ಅಪರೂಪದ ಮಡಕೆ ದೊರಕಿದೆ. ಇದು ಇಂದಿನ ಆಧುನಿಕ ಮನೆಗಳಲ್ಲಿ ಹಾಲಿನ ಪಾತ್ರೆ ಮಾದರಿಯಲ್ಲಿದೆ. ದುಂಡಾಗಿರುವ ಪಾತ್ರೆಗೆ ಹಿಡಿಕೆಯನ್ನು ಮಾಡಲಾಗಿದೆ. ಈ ಹಿಡಿಕೆಯ ಮೇಲ್ಮೈಯಲ್ಲಿ ಸುರಳಿಯಾಕಾರದ ಅಲಂಕಾರದ ಗೆರೆಗಳಿವೆ (Branfill 1881: Fig.16).



ಇಟ್ಟಿಗೆಬೈಲು ಉತ್ಖನನದಲ್ಲಿ ದೊರೆತ ಅಪರೂಪದ ಮಡಕೆ
[ಕೃಪೆ : Branfill 1881]

ಈ ಮಾದರಿಯ ಮಡಕೆಗಳು ಕಬ್ಬಿಣಯುಗ ಸಂಸ್ಕೃತಿಯ ನೆಲೆಗಳಲ್ಲಿ ಬೇರೆ ಕಡೆಗಳಲ್ಲಿ ದೊರಕಿದ ಉದಾಹರಣೆಗಳಿಲ್ಲ. ಇಟ್ಟಿಗೆಬೈಲು ಉತ್ಖನನದಲ್ಲಿ ಕಬ್ಬಿಣದಿಂದ ಮಾಡಿದ ಖಡ್ಗ, ಈಟಿ, ಬಾಣ, ಮಚ್ಚು, ಸೂಜಿ, ಇತ್ಯಾದಿ ಆಯುಧಗಳನ್ನು ಸಂಶೋಧಕರು ಶೋಧಿಸಿದ್ದಾರೆ. ಕಬ್ಬಿಣಯುಗದ ಈ ಆಯುಧಗಳಿಂದ ಲೋಹದ ಆವಿಷ್ಕಾರವಾದ ನಂತರ ರಚನೆಯಾದ ಆಯುಧಗಳು ಹಾಗೂ ಅವುಗಳ ಬಳಕೆಯ ವಿಧಾನಗಳನ್ನು ಗುರುತಿಸಬಹುದು. ಇಟ್ಟಿಗೆಬೈಲು ಉತ್ಖನನಗಳಲ್ಲಿ ಕಪ್ಪು ಮತ್ತು ಕೆಂಪು ದ್ವಿವರ್ಣದ



ಇಟ್ಟಿಗೆಬ್ಬೈಲು ಉತ್ಖನನಗಳಲ್ಲಿ ದೊರೆತ 'ಕಪ್ಪು ಮತ್ತು ಕೆಂಪು ದ್ವಿವರ್ಣ'ದ ಮಡಕೆ

*(Black & Red Ware)* ಅತ್ಯಂತ ನುಣುಪಾದ ವಿಶಿಷ್ಟ ಮಣ್ಣಿನ ಪಾತ್ರೆಗಳು ದೊರಕಿರುವ ವರದಿಗಳಿವೆ.

ದಕ್ಷಿಣ ಭಾರತ ಒಳಗೊಂಡಂತೆ ಭಾರತದಲ್ಲಿ ಕಬ್ಬಿಣಯುಗ ಸಂಸ್ಕೃತಿಯ ಕಾಲದಲ್ಲಿ ಕಂಡು ಬರುವ ಕಪ್ಪು ಮತ್ತು ಕೆಂಪು ದ್ವಿವರ್ಣದ ನುಣುಪಾದ ಮಡಕೆಗಳ ಏಕರೂಪದ ತಂತ್ರಜ್ಞಾನ ಹಾಗೂ ಅವುಗಳು ಎಲ್ಲೆಡೆ ಈ ಕಾಲಘಟ್ಟದಲ್ಲಿ ಮಾತ್ರ ಪ್ರಚಲಿತದಲ್ಲಿರುವುದು ವಿದ್ವಾಂಸರಲ್ಲಿ ತುಂಬಾ ಜಿಜ್ಞಾಸೆ ಹುಟ್ಟಿಸಿದೆ. ಇವು ಶ್ರೀಮಂತರ ಮಡಕೆಗಳೆಂದು ಅವುಗಳ ತಯಾರಿಕೆ ಹಿಂದೆ ಒಂದು ವ್ಯವಸ್ಥಿತವಾದ ಸಂಘಟನೆ ಹಾಗೂ ಏಕರೂಪದ ತಂತ್ರಜ್ಞಾನ ಇರುವ ಸಾಧ್ಯತೆಯನ್ನು ವಿದ್ವಾಂಸರು ಗುರುತಿಸಿದ್ದಾರೆ. ಇಂತಹ ಪಾತ್ರೆಗಳು ಸಮಾಧಿಯಲ್ಲಿ ಶವ ಸಂಸ್ಕಾರದ ಆಚರಣೆಯಲ್ಲಿ ಕಂಡುಬರುವುದು ಒಂದು ವಿಶೇಷ. ಈ ಶ್ರೀಮಂತರ ಮಡಕೆಗಳ ಹೊರತಾಗಿ ಇಟ್ಟಿಗೆಬ್ಬೈಲಿನಲ್ಲಿ ಸರಳ ಮಾದರಿಯ ಕೆಂಪು ವರ್ಣದ ಹಾಗೂ ತಿಳಿ ಕಂದು ಬಣ್ಣ ಮಿಶ್ರಿತ ಕೆಂಪು ವರ್ಣದ ಮಡಕೆಗಳು ದೊರಕಿವೆ.* ಇದೇ ಉತ್ಖನನದಲ್ಲಿ ಸಮಾಧಿಯಲ್ಲಿರಿಸಿದ್ದ ದೊಡ್ಡ ಮಣ್ಣಿನ ಮಡಕೆಯಲ್ಲಿ ಹೂತಿಟ್ಟ ಮಾನವನ ಅಸ್ಥಿಪಂಜರ ದೊರೆತಿರುವ ಮಾಹಿತಿಯನ್ನು ನೀಡಿದ್ದಾರೆ. ಅಲ್ಲದೇ ಇನ್ನೊಂದು ಮಡಕೆಯಲ್ಲಿ ನಯವಾದ ಮಣ್ಣಿನೊಂದಿಗೆ ಧಾನ್ಯದ ಕಾಳುಗಳು ಬೆರೆತಿರುವುದನ್ನು ವರದಿ ಮಾಡಿದ್ದಾರೆ (Branfill 1881:4). ಇವೆಲ್ಲವುಗಳು ಆ ಕಾಲದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಲು ತುಂಬಾ ಸಹಾಯಕವಾಗುತ್ತವೆ. ಅದರಂತೆ ಅನೇಕ ಮಡಕೆಗಳ ಹೊರಮೈ ಮೇಲೆ ಗೀಚುಗಳಂತಹ ಗೆರೆಗಳಿರುವುದನ್ನು ಈ ವರದಿಯಲ್ಲಿ ದಾಖಲಿಸಿದ್ದಾರೆ (Branfill 1881: Fig.9; 12; 19b; & 28).



ಜಡಿಗೇನಹಳ್ಳಿಯಲ್ಲಿ ದೊರೆತ ಕಬ್ಬಿಣಯುಗದ ಮಡಕೆಗಳ ಹೊರಮೈ ಮೇಲೆ ಗೀಚುಗಳು

**[ಕೃಪೆ : Seshadri 1960]**

---

* ಬೆಂಗಳೂರಿನ ಮ್ಯೂಸಿಯಂನಲ್ಲಿ ಇಟ್ಟಿರುವ ಸಾವನದುರ್ಗದ ಇಟ್ಟಿಗೆಬ್ಬೈಲು ಅವಶೇಷಗಳಲ್ಲಿ ಕಪ್ಪು ಬಣ್ಣದ ಮಡಕೆಗಳನ್ನೂ ಕಾಣಬಹುದು. –ಸಂಪಾದಕರು.



ಇಟ್ಟಿಗೆಬೈಲು ಉತ್ಖನನದಲ್ಲಿ ದೊರೆತ ಮಡಕೆಗಳ ಹೊರಮೈ ಮೇಲಿನ ಗೀಚುಗಳು
[ಕೃಪೆ : **Branfill 1881**]

ಈ ರೀತಿಯ ಗೆರೆಗಳಿರುವ ಮಡಕೆಗಳು ಚಿಕ್ಕಜಾಲ, ಜಡಿಗೇನಹಳ್ಳಿ, ಬೆಂಗಳೂರು ಪರಿಸರದ ಇತರೆಡೆಯ ಕಬ್ಬಿಣಯುಗದ ಬೃಹತ್ ಶಿಲಾ ಗೋರಿಗಳ ನೆಲೆಗಳಲ್ಲಿ ಶೋಧಿಸಲಾಗಿದೆ. ದಕ್ಷಿಣ ಭಾರತದ ಅನೇಕ ಪ್ರಾಚೀನ ನೆಲೆಯಲ್ಲಿಯೂ ಈ ಮಾದರಿಯ ಗೆರೆಗಳಿರುವ ಮಡಕೆಗಳು ಲಭ್ಯವಾಗಿವೆ. ಚರಿತ್ರೆ ಆರಂಭ ಕಾಲದಲ್ಲಿ ಉಗಮಗೊಂಡ ಬ್ರಾಹ್ಮಿ ಲಿಪಿಗೂ ಮುಂಚೆ ಮಡಕೆಗಳ ಹೊರಮೈಮೇಲೆ ಗೆರೆಗಳ ಮೂಲಕ ಉತ್ಪಾದಕನ ಹೆಸರು ಅಥವಾ ಕೆಲವು ಸಂದೇಶ ನೀಡಿದ್ದಾರೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಒಂದು ವೇಳೆ, ಇವು ಬ್ರಾಹ್ಮಿಪೂರ್ವದ ಲಿಪಿಯಾದರೇ, ಬೆಂಗಳೂರು ಪರಿಸರದಲ್ಲಿ ಬಳಕೆಯಾಗುತ್ತಿದ್ದ ಅತ್ಯಂತ ಹಳೆಯ ಲಿಪಿಗಳೆಂದು ಗುರುತಿಸಬಹುದು. ಅದೇ ರೀತಿ ಇಂತಹ ಗೆರೆಗಳಿಂದ ಲಿಪಿಯ ಉಗಮವಾಗಿರುವ ಸಾಧ್ಯತೆಯನ್ನೂ ಪರಿಶೀಲಿಸಬಹುದು.

**ಜಡಿಗೇನಹಳ್ಳಿ ಉತ್ಖನನಗಳು:** ಬೆಂಗಳೂರಿನ ಪರಿಸರದ ದಕ್ಷಿಣ ಪಿನಾಕಿನಿ ನದಿ ಕಣಿವೆ ಪ್ರದೇಶದ ಸಂಸ್ಕೃತಿಯ ಕುರುಹುಗಳ ಪ್ರತೀಕವಾದ ಜಡಿಗೇನಹಳ್ಳಿಯಲ್ಲಿ ೧೯೬೨ರಲ್ಲಿ ಮೈಸೂರು ರಾಜ್ಯ ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿದ್ದ ಎಂ.ಶೇಷಾದ್ರಿಯವರು ಕೈಕೊಂಡ ಉತ್ಖನನಗಳು ಬಹಳ ಮಹತ್ವದ್ದು. ಹೊಸಕೋಟೆ ತಾಲೂಕಿನಲ್ಲಿರುವ ಜಡಿಗೇನಹಳ್ಳಿಯು ಬೆಂಗಳೂರಿನಿಂದ ಮಾಲೂರಿಗೆ ಹೋಗುವ ಹೆದ್ದಾರಿಯಲ್ಲಿದೆ. ಇಲ್ಲಿ ೨೦ ಅಡಿ ಉದ್ದ; ೧೦ ಅಡಿಗಳಷ್ಟು ಆಳವಿರುವ ದೊಡ್ಡ ಸಮಾಧಿಗಳಿವೆ. ಪಕ್ಕದಲ್ಲಿ ನೀರಿನ ತೊರೆ ಹರಿಯುತ್ತದೆ. ಈ ನೆಲೆಯಲ್ಲಿ ಶೇಷಾದ್ರಿಯವರು ನಾಲ್ಕು ಸಮಾಧಿಗಳ ಅವಶೇಷಗಳನ್ನು ಉತ್ಖನನದ ಮೂಲಕ ಹೊರತೆಗೆದರು (Seshadri 1960). ಈ ಸಮಾಧಿಗಳನ್ನು ನೆಲದಲ್ಲಿ ೧೦ ಅಡಿ ಆಳವಾದ ಕುಣಿಗಳನ್ನು ಮಾಡಿ ಮಣ್ಣಿನಲ್ಲಿ ರಚಿಸಿದ ಶವಪೆಟ್ಟಿಗೆ (*Sarcopagus*) ಇರಿಸಿ, ಅದರ ಜೊತೆಗೆ ಹಲವಾರು ಪಾತ್ರೆಗಳು, ಕಬ್ಬಿಣದ ಆಯುಧಗಳನ್ನು ಇರಿಸಿ ಮಣ್ಣು ಕಲ್ಲುಗಳಿಂದ ಮುಚ್ಚಿರುತ್ತಾರೆ. ಮಣ್ಣಿನಿಂದ ಮುಚ್ಚಿದ ಸಮಾಧಿಯ ಮೇಲ್ಭಾಗದಲ್ಲಿ ಕಪ್ಪು ಕಲ್ಲುಗಳನ್ನು ವೃತ್ತಾಕಾರದಲ್ಲಿ ಜೋಡಿಸಲಾಗಿದೆ. ಗಾತ್ರದಲ್ಲಿ ದೊಡ್ಡದಾದ ಈ ಸಮಾಧಿಗಳಲ್ಲಿ ಮಣ್ಣಿನ ಶವಪೆಟ್ಟಿಗೆಗಳು ಇರುವುದು ಅತ್ಯಂತ ವಿಶೇಷ.

ಅರ್ಕಾವತಿ ಬಯಲಿನ ಕಬ್ಬಿಣಯುಗದ ಸಮಾಧಿಗಳಿಗಿಂತಲೂ ಭಿನ್ನವೆನಿಸುವ ಈ ಸಮಾಧಿಗಳು ಆಂಧ್ರಪ್ರದೇಶದ ಗಡಿಯಲ್ಲಿ ಕಂಡು ಬರುವ 'ಶವಪೆಟ್ಟಿಗೆ ಶವಸಂಸ್ಕಾರ ಪದ್ಧತಿ'ಗಳನ್ನು ಇಲ್ಲಿ ಕಾಣುತ್ತೇವೆ. ಶವಪೆಟ್ಟಿಗೆಗಳ ಜೊತೆಗೆ ಇರಿಸಲಾದ ಮಡಕೆಗಳನ್ನು ಹಲವಾರು ವಿನ್ಯಾಸ ಹಾಗೂ ವರ್ಣಗಳಲ್ಲಿ ರಚಿಸಲಾಗಿದೆ. ಕಪ್ಪು-ಕೆಂಪು ದ್ವಿವರ್ಣ




ಜಡಿಗೇನಹಳ್ಳಿಯಲ್ಲಿ ದೊರೆತ ಮಣ್ಣಿನ ಶವಪೆಟ್ಟಿಗೆಯುಕ್ತ ಸಮಾಧಿ

[ಕೃಪೆ : Seshadri 1960]

ಮಡಕೆಗಳು ಇಲ್ಲಿಯೂ ದೊರಕಿವೆ. ಅವುಗಳಲ್ಲದೇ, ಕೆಂಪು, ಕಪ್ಪು ಹಾಗೂ ತಿಳಿ ಕೆಂಪು ಮಿಶ್ರಿತ ಕಪ್ಪು ವರ್ಣದ ಪಾತ್ರೆಗಳನ್ನು ಈ ಉತ್ಖನನದಲ್ಲಿ ಶೋಧಿಸಲಾಗಿದೆ. ಆದರೆ ಸಿಲಿಂಡರ್ ಆಕಾರದ ತಳಭಾಗದಲ್ಲಿ ಕಾಲುಗಳುಳ್ಳ ಉದ್ದವಾದ ಮಡಕೆಗಳು ಇಲ್ಲಿ ಕಂಡು ಬರುವುದಿಲ್ಲ. ಅಲ್ಲದೆ ಈ ಸಮಾಧಿಗಳಲ್ಲಿ ಶವಗಳ ಅಸ್ಥಿಪಂಜರಗಳು ಅಥವಾ ಕಳೆಬರಗಳು ದೊರಕಿಲ್ಲ. ಇದು ಕೂಡ ಒಂದು ಕುತೂಹಲಕಾರಿಯಾದ ಅಂಶ. ಕಬ್ಬಿಣ ಲೋಹದಲ್ಲಿ ಮಾಡಲಾದ ಖಡ್ಗ, ಈಟಿ, ಅಡ್ಡಣಿಗೆ, ಗುಳ (ಹಾಲ), ಕುಡುಗೋಲು, ಇತ್ಯಾದಿಗಳು ಉತ್ಖನನದಲ್ಲಿ ದೊರೆತಿವೆ.



ಜಡಿಗೇನಹಳ್ಳಿಯಲ್ಲಿ ದೊರೆತ ಕಬ್ಬಿಣದ ಕೃಷಿ ಉಪಕರಣಗಳು

[ಕೃಪೆ : Seshadri 1960]

ಅಲ್ಲದೆ ಮಡಕೆಗಳ ಹೊರಮೈಭಾಗದಲ್ಲಿಯೂ ಗೀಚುಗಳ ಆಕಾರದ ಗೆರೆಗಳನ್ನು ಮಾಡಿರುವುದನ್ನು ಗಮನಿಸಬಹುದು. ಈ ಗೆರೆಗಳು ಕೂಡ ಮಡಕೆಗಳನ್ನು ಉತ್ಪಾದಿಸಿದವರ ಹೆಸರುಗಳನ್ನು ನಮೂದಿಸುತ್ತಿರುವ ಸಾಧ್ಯತೆಗಳಿವೆ. ಒಟ್ಟಿನಲ್ಲಿ ಜಡಿಗೇನಹಳ್ಳಿಯ ಉತ್ಖನನಗಳು ಬೆಂಗಳೂರು ಪರಿಸರದ ಪೂರ್ವ ಭಾಗದ ಸಂಸ್ಕೃತಿಯನ್ನು ಬಿಂಬಿಸುವ ಅವಶೇಷಗಳನ್ನು ಒದಗಿಸಿದರೆ, ಸಾವನದುರ್ಗದ ಬಳಿಯ ಇಟ್ಟಿಗೆಪ್ಪೆಲು ಉತ್ಖನನಗಳಲ್ಲಿ ಪಶ್ಚಿಮ ವಲಯದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ ಎಂಬ ಅಭಿಪ್ರಾಯ ವ್ಯಕ್ತವಾಗುತ್ತದೆ. ಮನಗೊಂಡನಹಳ್ಳಿಯ ಉತ್ಖನನದಲ್ಲಿ ಆರ್. ನರಸಿಂಹಾಚಾರ್ ಅವರು ಸಿಲಿಂಡರ್ ಆಕಾರದ ಮಣ್ಣಿನ ಮಡಕೆಗಳನ್ನು ಶೋಧಿಸಿದ್ದಾರೆ. ಈ ಮಡಕೆಗಳು ನೇರವಾಗಿ ನಿಲ್ಲುವುದಕ್ಕೆ ತಳಭಾಗದಲ್ಲಿ ಅಡ್ಡಣಿಗೆಯಂತಹ ಮೂರು ಕಾಲುಗಳನ್ನು ಮಾಡಲಾಗಿದೆ. ಧಾನ್ಯಗಳನ್ನು ಶೇಖರಿಸಿಡಲು ರಚಿಸುವ ದೊಡ್ಡಗಾತ್ರದ ಮಡಕೆಗಳು (ಗುಡಾಣಗಳು) ಕೂಡ ಮನಗೊಂಡನಹಳ್ಳಿಯ ಉತ್ಖನನಗಳಲ್ಲಿ ದೊರಕಿವೆ.

ಒಟ್ಟಿನಲ್ಲಿ ಬೆಂಗಳೂರು ಪರಿಸರದಲ್ಲಿ ಕಬ್ಬಿಣಯುಗ ಸಂಸ್ಕೃತಿಯ ಕಾಲಾವಧಿಯಲ್ಲಿ ಕಲ್ಗೋರಿ, ಮಡಕೆ ಮತ್ತು ಮಣ್ಣಿನ ಶವಪೆಟ್ಟಿಗೆಯನ್ನು ಬಳಸಿ ಶವ ಸಂಸ್ಕಾರ ಮಾಡಿರುವುದನ್ನು ಕಾಣುತ್ತೇವೆ. ಅದರಂತೆ ಕಬ್ಬಿಣದಲ್ಲಿ ಮಾಡಲಾದ ವಿವಿಧ ಉಪಕರಣಗಳು ಬಳಕೆಯಲ್ಲಿ



ಆರ್. ನರಸಿಂಹಾಚಾರ್ ಅವರು ಕೈಗೊಂಡ ಮನಗೊಂಡನಹಳ್ಳಿಯ ಉತ್ಖನನದಲ್ಲಿ ದೊರೆತ ಸಿಲಿಂಡರ್ ಆಕಾರದ ಮಡಕೆ ಮತ್ತಿತರ ಮಣ್ಣಿನ ಮಡಕೆಗಳು.
[ಕೃಪೆ : *MAR* 1917]

ಬಂದಿದ್ದವು. ಧಾನ್ಯಗಳನ್ನು ಶೇಖರಿಸಿಡುವ ದೊಡ್ಡ ಗಾತ್ರದ ಹಲವಾರು ಮಡಕೆಗಳನ್ನು ತಯಾರು ಮಾಡಿರುವುದನ್ನು ಗಮನಿಸ ಬಹುದು. ಇದರಿಂದ , ಕೃಷಿಯ ಉತ್ಪಾದನೆಯು ತೀವ್ರಗೊಂಡಿತ್ತೆಂದು ಊಹಿಸಬಹುದು. ಕಬ್ಬಿಣಯುಗದ ಸಮಾಧಿ ನೆಲೆಗಳು ಬೆಂಗಳೂರು ಪರಿಸರ ಒಳಗೊಂಡಂತೆ ದಕ್ಷಿಣ ಭಾರತದ ವಿವಿಧ ಸ್ಥಳಗಳಲ್ಲಿ ದೊರಕಿವೆ. ನವಶಿಲಾಯುಗ ಹಾಗೂ ತಾಮ್ರಯುಗದ ನೆಲೆಗಳಿಗೆ ಹೋಲಿಸಿದರೆ, ಕಬ್ಬಿಣಯುಗ ಸಂಸ್ಕೃತಿಯ ನೆಲೆಗಳು ದ್ವಿಗುಣಗೊಂಡಿರುವುದನ್ನು ಕಾಣುತ್ತೇವೆ. ಈ ಬದಲಾವಣೆಯನ್ನು ಗಮನಿಸಿ ಕಬ್ಬಿಣಯುಗದ ಕಾಲದಲ್ಲಿ ಜನಸಂಖ್ಯೆ ವೃದ್ಧಿಸಿತು ಎಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಅಲ್ಲದೇ, ಶವಸಂಸ್ಕಾರ ಮಾಡುವುದಕ್ಕೋಸ್ಕರ ಕಲ್ಗೋರಿ, ದೊಡ್ಡ ಗಾತ್ರದ ಮಡಕೆಗಳ ರಚನೆ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದ್ದು, ಜನರು ಸಂಘಟಿತರಾಗಿ ಒಂದು ಧಾರ್ಮಿಕ ಆಚರಣೆಯಂತೆ ಒಟ್ಟಾಗಿ ಮಾಡುವ ಕಾರ್ಯವು ಶ್ರದ್ಧೆ ಹಾಗೂ ಶ್ರಮಗಳಿಂದ ಕೂಡಿತ್ತು. ಸಂಘಟಿತ ಶ್ರಮದ ಹಿನ್ನೆಲೆಯುಳ್ಳ ಸಮಾಜದ ಉಗಮ ಕಬ್ಬಿಣಯುಗದ ಕಾಲದಲ್ಲಿ ಪ್ರಾರಂಭವಾಯಿತು ಎಂದು ಇದರಿಂದ ಸ್ಪಷ್ಟವಾಗುತ್ತದೆ. ಕಬ್ಬಿಣದ ಉಪಯೋಗದಿಂದ ಕೃಷಿ ಚಟುವಟಿಕೆಗಳಿಗೆ ಉತ್ತೇಜನ ದೊರೆಯಿತು. ಕೃಷಿಯೇತರ ಚಟುವಟಿಕೆಗಳಾದ ಕಮ್ಮಾರಿಕೆ, ಕುಂಬಾರಿಕೆ, ಕಟ್ಟಡ ನಿರ್ಮಾಣಗಾರಿಕೆ, ಲೋಹಗಾರಿಕೆ, ಮುಂತಾದ ಗುಡಿ ಕೈಗಾರಿಕೆಯಂತಹ ವರ್ಗಗಳು ಸಮಾಜದಲ್ಲಿ ಉದಯಿಸಿದವು. ಒಂದು ಪ್ರಬುದ್ಧ ಸಮಾಜ ನಿರ್ಮಾಣಗೊಳ್ಳುವ ಪ್ರಕ್ರಿಯೆ ಈ ಯುಗದಲ್ಲಿ ಆರಂಭವಾಗುವುದನ್ನು ಕಾಣುತ್ತೇವೆ.

**ಕಲ್ಲುಸೇವೆ ಪದ್ಧತಿ:** ಮಾಗಡಿ ಪರಿಸರದಲ್ಲಿ ಕೆಲವು ಸಮುದಾಯದವರು ಶವಗಳನ್ನು ಹೂಳುವುದಾಗಲಿ ಅಥವಾ ಸುಡುವುದಾಗಲಿ ಮಾಡದೆ ಶವವನ್ನು ಬೆಟ್ಟ ಬಂಡೆಗಳಲ್ಲಿ ಇರಿಸುತ್ತಾರೆ. ವನ್ಯ ಪ್ರಾಣಿಗಳ ಆಹಾರವಾಗಿ ಅದು ಕೆಲವು ದಿನಗಳ ಕಾಲ ಇರುತ್ತದೆ. ಅನಂತರ ನಿಗದಿತ ದಿನದಂದು ಆ ಜಾಗಕ್ಕೆ ಹೋಗಿ ಶವದ ಕಳೆಬರಗಳನ್ನು ಕಲೆಹಾಕಿ ಅವುಗಳನ್ನು ಹೂತಿಡುತ್ತಾರೆ. ಈ ಶವಸಂಸ್ಕಾರ ಪದ್ಧತಿಯನ್ನು ಕಲ್ಲುಸೇವೆ ಪದ್ಧತಿ ಎಂದು ಕರೆಯುತ್ತಾರೆ. ಈ ಪದ್ಧತಿ ಇಂದಿಗೂ ಪ್ರಚಲಿತವಲ್ಲಿದೆ. ಪ್ರಾಚೀನ ಕಾಲದ ಶವಸಂಸ್ಕಾರದ

ಈ ಪದ್ಧತಿ ಇಂದಿಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವದನ್ನು ಗಮನಿಸಬಹುದು (ಹೆಚ್ಚಿನ ವಿವರಗಳಿಗೆ ನೋಡಿ– ಎಂ.ಎಸ್. ಕೃಷ್ಣಮೂರ್ತಿ ಮತ್ತು ಎಂ.ಪಿ. ಮಹದೇವಯ್ಯ ೧೯೯೯).

**ಇತಿಹಾಸ ಆರಂಭ ಕಾಲ**

ದಕ್ಷಿಣ ಭಾರತದಲ್ಲಿ ಕಬ್ಬಿಣಯುಗ ಕೊನೆಗೊಳ್ಳುತ್ತಿದ್ದಂತೆಯೇ ಇತಿಹಾಸ ಆರಂಭ ಕಾಲ (Early Historic period) ಪ್ರಾರಂಭವಾಗುತ್ತದೆ ಎಂಬುದನ್ನು ಬ್ರಹ್ಮಗಿರಿ ಉತ್ಖನನಗಳಲ್ಲಿ ಮಾರ್ಟಿಮರ್ ವೀಲ್ಹರ್ ಅವರು ಪ್ರತಿಪಾದಿಸಿದರು (Wheeler 1947-48). ಉತ್ತರ ಕರ್ನಾಟಕ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಲ್ಲಿ ಈ ಕಾಲವನ್ನು 'ಶಾತವಾಹನರ ಕಾಲ'ವೆಂತಲೂ ಕರೆಯುತ್ತಾರೆ. ಕಾವೇರಿ ಸೀಮೆ ಮತ್ತು ತಮಿಳುನಾಡಿನ ಬಹುತೇಕ ಪ್ರದೇಶಗಳಲ್ಲಿ 'ಶಂಗಂ ಸಾಹಿತ್ಯ' ಕಾಲವೆಂತಲೂ ಗುರುತಿಸುತ್ತಾರೆ. ಬೆಂಗಳೂರು ಪರಿಸರ ಒಂದು ಸಂಕೀರ್ಣ ಪ್ರದೇಶವಾಗಿದ್ದು, ಇದನ್ನು ಶಂಗಂ ಸಾಹಿತ್ಯದಲ್ಲಿ ಗುರುತಿಸಿದಂತೆ 'ವೇಂಗಡಂ' ಅಥವಾ 'ವಡುಗರು' ಪ್ರದೇಶವಾಗಿತ್ತು (ಶೆಟ್ಟರ್ ೨೦೦೭: ೧೩೫–೧೩೬). ಈ ವಡುಗರು ಪ್ರದೇಶವು ಚಿತ್ತೂರು, ಕೋಲಾರ. ಚಿಕ್ಕಬಳ್ಳಾಪುರ ಜಿಲ್ಲೆಗಳ ಪ್ರದೇಶಗಳಾಗಿದ್ದವು.



ಹೆಚ್.ಎ.ಎಲ್. ವಿಮಾನ ನಿಲ್ದಾಣದಲ್ಲಿ ದೊರೆತ ರೋಮನ್ ನಾಣ್ಯಗಳು

ಅಲ್ಲದೇ ಬೆಂಗಳೂರಿನ ಪರಿಸರ ಕೂಡ ಈ ಶಂಗಂ ಸಾಹಿತ್ಯದ ವಡುಗರು ಪ್ರದೇಶಕ್ಕೆ ಒಳಪಟ್ಟಿತ್ತು. ವಡುಗರು ಪ್ರದೇಶವೆಂದರೆ ಶಂಗಂ ಸಂಸ್ಕೃತಿ ಪ್ರದೇಶದ ಉತ್ತರ ಭಾಗವೆಂದು ಗುರುತಿಸಲ್ಪಡುತ್ತಿತ್ತು. ಮೌರ್ಯ ಚಕ್ರವರ್ತಿ ಅಶೋಕನ ರಾಜ್ಯದ ದಕ್ಷಿಣದ ಗಡಿಯಾಚೆ ಸು.೨೫೦ ಕಿ.ಮೀ. ದೂರದಲ್ಲಿ ಬೆಂಗಳೂರು ಪರಿಸರವು ಇದೆ. ಬೆಂಗಳೂರು ಪರಿಸರದಲ್ಲಿ ತರಬನಹಳ್ಳಿ, ಆನೇಕಲ್ಲು, ಸಾವನದುರ್ಗ, ಲಾಲ್‌ಬಾಗ್, ಇತ್ಯಾದಿ ಕಡೆಗಳಲ್ಲಿ ಇತಿಹಾಸ ಆರಂಭಕಾಲದ ಅವಶೇಷಗಳು ಹಾಗೂ ಪುರಾತನ ಮಡಕೆಗಳನ್ನು ಹೊರತುಪಡಿಸಿ ಕೆಲವು ಕಡೆ ರೋಮನ್ ನಾಣ್ಯಗಳು (ಯಶವಂತಪುರ ಮಾರ್ಗದ ರೈಲ್ವೆ ನಿರ್ಮಾಣ ಕಾರ್ಯದ ವೇಳೆಯಲ್ಲಿ ಹಾಗೂ ಹೆಚ್.ಎ.ಎಲ್. ವಿಮಾನ ನಿಲ್ದಾಣದ ರನ್‌ವೇ ನಿರ್ಮಾಣದ ವೇಳೆಯಲ್ಲಿ) ದೊರಕಿರುವ ವರದಿಗಳಿವೆ.

ರೋಮನ್ ಸಾಮ್ರಾಜ್ಯದ ಅರಸರಾದ ಅಗಸ್ಟಸ್ (ಕ್ರಿ.ಪೂ. ೨೯ ರಿಂದ ಕ್ರಿ.ಶ. ೧೪) ಮತ್ತು ಟೈಬಿರಿಯಸ್ (ಕ್ರಿ.ಶ. ೧೪ ರಿಂದ ೨೭) ಅವರ ಕಾಲದ ನಾಣ್ಯಗಳು ಈ ಪರಿಸರದಲ್ಲಿ ದೊರೆತಿವೆ. ಅದರಂತೆ ಸಾವನದುರ್ಗದ ಬಳಿಯ ಇಟ್ಟಿಗೆಬ್ಯೆಲು ಉತ್ಖನನದಲ್ಲಿ ಮುದ್ರಾಂಕಿತ ಅಥವಾ ಪಂಚ್‌ಮಾರ್ಕ್ ನಾಣ್ಯ ದೊರೆತ ವರದಿ ಇದೆ (Branfill 1881:3). ಒಟ್ಟಿನಲ್ಲಿ ಬೆಂಗಳೂರು ಪರಿಸರ ಕೂಡ ಇತಿಹಾಸ ಆರಂಭಕಾಲದಲ್ಲಿ ಒಂದು ಬೃಹತ್ ಸಂಸ್ಕೃತಿಯನ್ನು ಬೆಳೆಸಿತ್ತು ಎನ್ನುವುದಕ್ಕೆ ಸಾಕಷ್ಟು ಪುರಾವೆಗಳಿವೆ. ಮೌರ್ಯರ ಸಾಮ್ರಾಜ್ಯಕ್ಕೆ ಒಳಪಡದಿದ್ದರೂ ಸಮಾನವಾದ ರಾಜ್ಯಾಡಳಿತದ ಅಧೀನಕ್ಕೆ ಒಳಪಟ್ಟಿತ್ತು ಎನ್ನುವುದಕ್ಕೆ ಪೂರಕ ಆಕರಗಳಿವೆ. ಕಬ್ಬಿಣಯುಗ ಸಂಸ್ಕೃತಿಯಲ್ಲಿ ನಿರ್ಮಾಣಗೊಂಡ ಬೃಹತ್ ಶಿಲಾಗೋರಿಗಳ ಸಂಖ್ಯೆಗಳನ್ನು ಆಧರಿಸಿ ಜನಸಾಂದ್ರತೆ ವೃದ್ಧಿಸಿದ್ದನ್ನು ಗುರುತಿಸಬಹುದಾಗಿದೆ. ಸಂಘಟಿತ ಸಮಾಜ ನಿರ್ಮಾಣವಾಗುವುದರೊಂದಿಗೆ ರಾಜಕೀಯದಂತಹ ನಿಯಂತ್ರಣ ಮಾಡುವ ಶಕ್ತಿಗಳು ಉದಯಗೊಂಡು ಏಕರೂಪದ ವ್ಯವಸ್ಥೆ ನಿರ್ಮಾಣಕ್ಕೆ ಸಹಾಯಕವಾಗಿರುವ ಸಾಧ್ಯತೆ ಇದೆ. ಶಂಗಂ ಸಾಹಿತ್ಯದಲ್ಲಿ ಉಲ್ಲೇಖಿಸಿದಂತೆ ಚಿಕ್ಕ ಚಿಕ್ಕ ಸಮುದಾಯದ ಊರುಗಳು ತಮ್ಮ ಅಸ್ತಿತ್ವದ ಗಡಿಗಳನ್ನು ಅಥವಾ ತಮ್ಮ ಪಶುಸಂಗೋಪನೆಯ ಹುಲ್ಲುಗಾವಲುಗಳ ಗಡಿಗಳನ್ನು ಗುರುತಿಸುವ ಸಲುವಾಗಿ ಬೆಟ್ಟಗಳಲ್ಲಿ ಕಲ್ಗೋರಿಗಳನ್ನು ನಿರ್ಮಾಣ ಮಾಡುತ್ತಿದ್ದರು. 'ಮುಲ್ಲೈ' ಮತ್ತು 'ಪಾಳೈ' ಎಂಬ ಎರಡು ಪ್ರಭೇಧಗಳ ಪ್ರದೇಶಗಳನ್ನು ಶಂಗಂ ಸಾಹಿತ್ಯದಲ್ಲಿ ಉಲ್ಲೇಖಿಸಲಾಗಿದೆ. 'ಮುಲ್ಲೈ' ಎಂಬುದು ಪಶು ಸಂಗೋಪನೆಗೆ ಸೂಕ್ತವಾದ ಬೆಟ್ಟ-ಗುಡ್ಡ ಪ್ರದೇಶದ ನಾಡು. ಅದರಂತೆ 'ಪಾಳೈ' ಎಂಬುದು ಬಯಲುನಾಡು ಅಥವಾ ಒಣ ಭೂಮಿ ಸೂಚಿಸುತ್ತದೆ (Darshana 1997:152). ಈ ವಿಭಿನ್ನ ಪ್ರದೇಶಗಳಲ್ಲಿ ಉಗಮಗೊಂಡ ಸಂಸ್ಕೃತಿಗಳು ಇತಿಹಾಸ ಆರಂಭ ಕಾಲಕ್ಕೆ ಸಮೃದ್ಧಿಯಾಗಿ ಬೆಳೆದು ನಗರೀಕರಣ ಪ್ರಕ್ರಿಯೆಗೆ ಪೂರಕವಾಗಿ ಸ್ಪಂದಿಸಿದವು. ಬೆಂಗಳೂರು ಪರಿಸರದಲ್ಲಿಯೂ ಇತಿಹಾಸ ಆರಂಭ ಕಾಲದ ನಗರಗಳ ಉದಯವಾಗಿರುವುದನ್ನು ದೊರೆತ ಅವಶೇಷಗಳಿಂದ ಗುರುತಿಸಬಹುದು. ಈ ನಗರಗಳು ಅರ್ಕಾವತಿ ಹಾಗೂ ದಕ್ಷಿಣ ಪಿನಾಕಿನಿ ನದಿ ದಂಡೆಗಳ ಆಶ್ರಯದಲ್ಲಿ ಮೂಡಿಬಂದಿರುವ ಸಾಧ್ಯತೆಯನ್ನು ದೊರೆತ ಪ್ರಾಚೀನ ನೆಲೆಗಳನ್ನಾಧರಿಸಿ ಗುರುತಿಸಬಹುದಾಗಿದೆ. ನಂದಿ, ತರಬನಹಳ್ಳಿ, ಲಾಲ್‌ಬಾಗ್ ಹತ್ತಿರದ ಸಿದ್ದಾಪುರ, ಬೆಳ್ಳಂದೂರು, ಆನೆಕಲ್ಲು, ಇಟ್ಟಿಗೆಬ್ಯೆಲು ಇತ್ಯಾದಿ ನಗರಗಳು ವೃದ್ಧಿಸಿದಂತೆ ವ್ಯಾಪಾರ-ವಾಣಿಜ್ಯಗಳು ದ್ವಿಗುಣಗೊಳ್ಳತೊಡಗಿದವು. ಹೊರ ದೇಶದ ರೋಮನ್ನರ ಸಂಪರ್ಕವನ್ನು ವಾಣಿಜ್ಯ ವಹಿವಾಟುಗಳ ಮೂಲಕ

ಗುರುತಿಸಬಹುದು. ಇದಕ್ಕೆ ರೋಮನ್ ನಾಣ್ಯಗಳು ಸೂಕ್ತ ಆಕರಗಳಾಗಿವೆ. ಅದರಂತೆ ತರಬನಹಳ್ಳಿಯಲ್ಲಿ ದೊರೆತ ಕಾವಿ ಲೇಪನದಡಿ ಬಿಳಿ ಚಿತ್ರಗಳುಳ್ಳ ಮಡಕೆ(*Russet-coated painted ware*)ಗಳನ್ನು ಕೂಡ ದಕ್ಷಿಣ ಭಾರತದ ಇತಿಹಾಸ ಆರಂಭ ಕಾಲದ ಅನೇಕ ಪ್ರಾಚೀನ ನೆಲೆಗಳಲ್ಲಿ ಶೋಧಿಸಲಾಗಿದೆ (Nagaraja Roa 1978: 45). ವಿಶಿಷ್ಟವಾದ ಈ ಮಡಕೆಗಳು ಏಕರೂಪದ ತಂತ್ರಗಾರಿಕೆಯಲ್ಲಿ ರಚನೆಯಾಗಿವೆ. ರಚನೆಯ ಶೈಲಿ, ತಯಾರಿಕೆಯ ತಂತ್ರಜ್ಞಾನ ಹಾಗೂ ಅವುಗಳ ಸಾಗಾಣಿಕೆ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಈ ಎಲ್ಲಾ ವ್ಯವಸ್ಥೆಗಳ ಹಿಂದೆ ಒಂದು ಸಂಘಟಿತ ಸಮುದಾಯವು ನಿಯಂತ್ರಣ ಮಾಡುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ನಿಯಂತ್ರಣ ಮಾಡುವ ಸಮುದಾಯಗಳೇ ಮುಂದೆ ರಾಜಕೀಯ ಶಕ್ತಿಗಳಾಗಿ ರೂಪುಗೊಂಡು ಪ್ರಾದೇಶಿಕ ಮಟ್ಟದಲ್ಲಿ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಗಳನ್ನು ರೂಪಿಸಿ ಆಳ್ವಿಕೆಯನ್ನು ಸ್ಥಾಪಿಸಿದವು.

ಇತಿಹಾಸ ಆರಂಭ ಕಾಲದ ಈ ರಾಜಕೀಯ ವ್ಯವಸ್ಥೆಗಳು ಮೌರ್ಯ ಸಾಮ್ರಾಜ್ಯ ಗಡಿಯಾಚೆಗಿದ್ದಿತು. ಅದರಲ್ಲಿ ದಕ್ಷಿಣ ಭಾರತದ ಚೋಳ, ಚೇರ, ಪಾಂಡ್ಯ ಅರಸರ ಆಳ್ವಿಕೆಗಳಿದ್ದವು. ಬೆಂಗಳೂರು ಪರಿಸರ ಪ್ರಾಯಶಃ ಪ್ರಾಚೀನ ಚೋಳರ ಅಥವಾ ಪಾಂಡ್ಯ ಆಳ್ವಿಕೆಗೆ ಒಳಪಟ್ಟಿರಬಹುದು. ಆದರೆ ಇವಕ್ಕೆ ಯಾವುದೇ ಆಧಾರಗಳಿಲ್ಲ. ಷ.ಶೆಟ್ಟರ್ ಅವರು ಅಭಿಪ್ರಾಯಪಟ್ಟಿರುವಂತೆ ಶಂಗಂ ಪ್ರದೇಶದ ಉತ್ತರಭಾಗದಲ್ಲಿ ಚಿಕ್ಕ ಚಿಕ್ಕ ರಾಜ್ಯಗಳು ಅಸ್ತಿತ್ವದಲ್ಲಿದ್ದವು. ಈ ಚಿಕ್ಕ ರಾಜ್ಯಗಳಲ್ಲಿ 'ಅಕ್ಷರ ಜ್ಞಾನ' ಹೊಂದಿದ್ದ ಸಮಾಜ ಬೆಳೆದಿತ್ತು (ಶೆಟ್ಟರ್ ೨೦೦೭ : ೧೫೨). ಈ ಸಮಾಜ ತನ್ನ ಆಯಕಟ್ಟಿನ ಭೌಗೋಳಿಕ ಪ್ರದೇಶದಿಂದಾಗಿ ವ್ಯಾಪಾರ-ವಾಣಿಜ್ಯಗಳನ್ನು ವಿಸ್ತರಿಸಿಕೊಂಡು ಒಳನಾಡಿನೊಳಗೆ ಹಾಗೂ ಸಮುದ್ರದ ಆಚೆಯ ಸಾಮ್ರಾಜ್ಯಗಳಾದ ರೋಮನ್ ಸಾಮ್ರಾಜ್ಯಗಳೊಂದಿಗೆ ವ್ಯಾಪಾರ ಸಂಪರ್ಕಗಳನ್ನು ಹೊಂದಿದ್ದವು. ಬೆಂಗಳೂರು ಪರಿಸರದ ಇತಿಹಾಸ ಆರಂಭ ಕಾಲದಲ್ಲಿ ರೂಪುಗೊಂಡ ಸಮಾಜದ ಹಾಗೂ ರಾಜಕೀಯ ವ್ಯವಸ್ಥೆಗಳ ಬಗ್ಗೆ ಇನ್ನೂ ಹೆಚ್ಚಿನ ಬೆಳಕು ಚೆಲ್ಲುವ ಹಲವಾರು ಅವಶೇಷಗಳು ಹಾಗೂ ಶಾಸನಗಳ ಅವಶ್ಯಕತೆ ಇದೆ. ವ್ಯವಸ್ಥಿತವಾದ ಅನ್ವೇಷಣೆ ಹಾಗೂ ಉತ್ಖನನಗಳನ್ನು ಕೈಗೊಳ್ಳುವುದರ ಮೂಲಕ ಹೆಚ್ಚಿನ ಅಧ್ಯಯನ ಮಾಡಬಹುದಾಗಿದೆ. ತಲಕಾಡಿನ ಗಂಗರ ಶಾಸನಗಳು ಬೆಂಗಳೂರು ಪರಿಸರದಲ್ಲಿ ದೊರೆತ ಅತ್ಯಂತ ಪ್ರಾಚೀನ ಶಾಸನಗಳಾಗಿವೆ. ಗಂಗರ ಪೂರ್ವದಲ್ಲಿ ಪ್ರಾಚೀನ ಬಾಣ ಅರಸರು ನಂದಿ ಬೆಟ್ಟಗಳ ಪರಿಸರದಲ್ಲಿ ಅಧಿಕಾರಕ್ಕೆ ಬಂದರೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ (ಕೃಷ್ಣಮೂರ್ತಿ ೨೦೦೯:೧೬). ನಂದಿ ಬೆಟ್ಟದ ಪಕ್ಕದ ಗೋಪಾಲಸ್ವಾಮಿ ಬೆಟ್ಟದಲ್ಲಿರುವ ಒಂದು ಬಂಡೆಯ ಮೇಲೆ ಬರೆಯಲಾದ ಗಂಗರ ಕಾಲದ ಜೈನರ ಕ್ರಿ.ಶ ೭೫೦(?)ರ ಶಿಲಾಶಾಸನ (*EC*-10 [ರೈಸ್ ಆವೃತ್ತಿ] CB-29) ಬೆಂಗಳೂರು ಪರಿಸರದಲ್ಲಿ ದೊರೆತ ಅತ್ಯಂತ ಹಳೆಯ ಶಿಲಾಶಾಸನವಾಗಿದೆ. ಜೈನ ಧರ್ಮದ ಮುನಿಗಳು ನಂದಿ ಪರಿಸರದಲ್ಲಿ ತಮ್ಮ ಧ್ಯಾನ ಮತ್ತಿತರ ಧಾರ್ಮಿಕ ಕಾರ್ಯಗಳಿಗೆ ಆಶ್ರಯ ಪಡೆದಿದ್ದರು ಎಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಮೌರ್ಯರ ಸಾಮ್ರಾಜ್ಯದಲ್ಲಿ ಬೌದ್ಧಧರ್ಮ ಪ್ರಚಲಿತದಲ್ಲಿದ್ದರೆ ದಕ್ಷಿಣ ಭಾರತದಲ್ಲಿ ಜೈನಧರ್ಮ ಪ್ರಚಲಿತದಲ್ಲಿತ್ತು. ಕಾಲ ಕಳೆದಂತೆ ಉತ್ತರ ಭಾಗದಲ್ಲಿದ್ದ ಬೌದ್ಧ ಧರ್ಮ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಂಡಿತು. ಬೌದ್ಧಧರ್ಮದ ಪ್ರಮುಖ ಕೇಂದ್ರವನ್ನು ರಾಜಘಟ್ಟದಲ್ಲಿ ಶೋಧಿಸಲಾಗಿದೆ. ಅಲ್ಲಿ ದೊರೆತ ಬೌದ್ಧ ಚೈತ್ಯ, ಬುದ್ಧನ ಶಿಲ್ಪಗಳು ಮೊದಲಾದವುಗಳೇ ಇದಕ್ಕೆ ಸಾಕ್ಷಿ.



ರಾಜಘಟ್ಟ ಉತ್ಖನನದ ಅವಶೇಷ

[ಕೃಪೆ : ಪ್ರೊ. ಎಂ.ಎಸ್. ಕೃಷ್ಣಮೂರ್ತಿ]

**ವಿಶ್ಲೇಷಣೆ:**

ಬೆಂಗಳೂರು ಪರಿಸರದಲ್ಲಿ ಪ್ರಾಗೈತಿಹಾಸಿಕ ಅಧ್ಯಯನಗಳಲ್ಲಿ ದೊರೆತ ಅವಶೇಷಗಳನ್ನು ಆಧರಿಸಿ ವಿಶ್ಲೇಷಿಸುವುದಾದರೆ, ಈ ಪರಿಸರದಲ್ಲಿ ಸು. ೧ ಲಕ್ಷ ವರ್ಷಗಳ ಹಿಂದೆಯೇ ಮಾನವ ನೆಲೆಯಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅಂತ್ಯ ಹಳೆ-ಶಿಲಾಯುಗ (Late-Stone Age ಅಥವಾ Upper Palaeolithic Age) ಕಾಲಕ್ಕೆ ಸೇರುವ ಈ ಸಂಸ್ಕೃತಿಯ ಶಿಲಾಯುಧಗಳು ಮನಗೊಂಡನಹಳ್ಳಿ ಬಳಿ ದೊರಕಿದ ಮಾಹಿತಿ ಇದೆ. ಅಂದರೆ ಸುಮಾರು ೧ ಲಕ್ಷ ವರ್ಷಗಳಿಂದ ನಿರಂತರವಾಗಿ ಈ ಪರಿಸರದಲ್ಲಿ ಹಲವು ಸಂಸ್ಕೃತಿಗಳು ಬೆಳೆದು ಬಂದಿವೆ ಎಂಬುದು ಸ್ಪಷ್ಟವಾಗುತ್ತದೆ. ಇಲ್ಲಿಯ ಪ್ರಮುಖ ನದಿಗಳಾದ ಅರ್ಕಾವತಿ ಮತ್ತು ದಕ್ಷಿಣ-ಪಿನಾಕಿನಿಗಳು ಇಲ್ಲಿಯ ಪ್ರಾಚೀನ ಸಂಸ್ಕೃತಿಗಳ ಉಗಮಕ್ಕೆ ಪ್ರಮುಖ ತಾಣಗಳಾಗಿದ್ದವು. ದಕ್ಷಿಣ-ಪಿನಾಕಿನಿ ನದಿಯ ಕಣಿವೆ ಪ್ರದೇಶ ವಿಶಾಲವಾದ ಮೈದಾನದಂತೆ ಕಾಣುತ್ತದೆ. ಈ ನದಿ ಕಣಿವೆಯಲ್ಲಿ ಬರುವ ಹಲಸೂರು, ವರ್ತೂರು, ಕೆ.ಆರ್.ಪುರಂ, ಕಾಡುಗೊಡಿ, ಹೊಸಕೋಟೆ ಇತ್ಯಾದಿ ಪ್ರದೇಶಗಳು ಹರವಾದ ಪ್ರದೇಶದಲ್ಲಿವೆ. ಹೊಸೂರು ಪ್ರದೇಶದವರೆಗೂ ಬೆಟ್ಟಗಳ ಶ್ರೇಣಿಗಳು ಕಾಣುವುದಿಲ್ಲ. ಆದರೆ, ಅರ್ಕಾವತಿ ನದಿ ತಾನು ಸಾಗುವ ೧೫೦ ಕಿ.ಮಿ. ಉದ್ದಕ್ಕೂ ಬೆಟ್ಟ-ಗುಡ್ಡಗಳ ಮೂಲಕ ಹರಿಯುತ್ತದೆ. ಈ ಎರಡು ನದಿಗಳ ಕಣಿವೆಗಳಲ್ಲಿ ಹುಟ್ಟಿದ ಪ್ರಾಗೈತಿಹಾಸಿಕ ಸಂಸ್ಕೃತಿಗಳು ಭಿನ್ನ ಸ್ವರೂಪದ ಲಕ್ಷಣಗಳನ್ನು ದೊರೆತ ಅವಶೇಷಗಳಿಂದ ಗುರುತಿಸಬಹುದು. ಜಡಿಗೇನಹಳ್ಳಿಯ ಉತ್ಖನನಗಳಲ್ಲಿ ದೊರೆತ 'ಮಣ್ಣಿನ ಶವಪೆಟ್ಟಿಗೆ'(*Sarcopagus*)ಗಳು ಅರ್ಕಾವತಿಯ ಇಟ್ಟಿಗೆಪೈಲು ಉತ್ಖನನದಲ್ಲಿ ಅಥವಾ ಈ ನದಿ ಕಣಿವೆಯ ಇತರ ನೆಲೆಗಳಲ್ಲಿ ದೊರೆತಿಲ್ಲ. ಅದರಂತೆ ತರಬನಹಳ್ಳಿಯಲ್ಲಿ ಇತಿಹಾಸ ಆರಂಭಕಾಲದ 'ಕಾವಿ ಲೇಪನದಡಿ ಬಿಳಿ ಚಿತ್ರಗಳುಳ್ಳ ಮಡಕೆ'(*Russet-coated painted ware*)ಗಳು ಅರ್ಕಾವತಿ ಕಣಿವೆಯಲ್ಲಿ ಕಂಡುಬಂದಿಲ್ಲ. ಈ ತೆರನಾದ ಹಲವಾರು ವಿಭಿನ್ನ ಲಕ್ಷಣಗಳನ್ನು ಸೂಕ್ಷ್ಮವಾಗಿ ಅಧ್ಯಯನದ ಮೂಲಕ ಗುರುತಿಸಬಹುದು.

ಪ್ರಾಚೀನ ಸೂಕ್ಷ್ಮಶಿಲಾಯುಗದಲ್ಲಿ ಬೆಂಗಳೂರು ಒಳಗೊಂಡಂತೆ, ದಕ್ಷಿಣ ಭಾರತದಲ್ಲಿ ಏಕರೂಪದ ಸಂಸ್ಕೃತಿ ಹರಡಿತ್ತು. ಅನಂತರದ ನವಶಿಲಾಯುಗ ಕಾಲಕ್ಕೆ ಪ್ರಾದೇಶಿಕ ಶೈಲಿಗಳು ಮೈಗೂಡಿಸಿಕೊಂಡು ಬೆಳೆಯತೊಡಗಿದವು. ಕಬ್ಬಿಣಯುಗಕ್ಕೆ ಆಗಮಿಸುತ್ತಿದ್ದಂತೆಯೇ, ಈ ಪರಿಸರದಲ್ಲಿ ಈ ಎರಡೂ ನದಿಗಳ ಕಣಿವೆಗಳಲ್ಲಿ ಎರಡು ಭಿನ್ನ ಶೈಲಿ ಸಂಸ್ಕೃತಿಗಳು ಬೆಳೆದುಬಂದವು. ಇತಿಹಾಸ ಆರಂಭ ಕಾಲದಲ್ಲಿ ಬೆಂಗಳೂರು ಪರಿಸರ ತನ್ನ ಸಂಕೀರ್ಣ ಭೌಗೋಳಿಕ ಲಕ್ಷಣಗಳಿಂದ ಒಂದು ಸುರಕ್ಷಿತ ತಾಣವಾಗಿತ್ತು. ಪ್ರಾಚೀನ ಬಾಣರು ಮತ್ತು ಕಳಬ್ರಹರು ಈ ಭಾಗದಲ್ಲಿ ಪ್ರಬಲರಾಗಿದ್ದರು. ಇವರ ಅಧೀನದಲ್ಲಿ ವ್ಯಾಪಾರ-ವಾಣಿಜ್ಯ ಕೈಕೊಳ್ಳುವ ಸಮುದಾಯಗಳು ಬಹಳ ಸಂಘಟಿತರಾಗಿ ಸಮಾಜದಲ್ಲಿ ಪ್ರಬಲರಾಗಿದ್ದರು. ಇವರು ಒಳನಾಡು ಮತ್ತು ಹೊರನಾಡಿನ ರಾಷ್ಟ್ರಗಳೊಂದಿಗೆ ವ್ಯಾಪಾರ ಸಂಬಂಧಗಳನ್ನು ಹೊಂದಿದ್ದರು ಎಂಬುದಕ್ಕೆ ಬೆಂಗಳೂರು ಸುತ್ತಮುತ್ತ ದೊರೆತ ರೋಮನ್ ನಾಣ್ಯಗಳೇ ಸಾಕ್ಷಿ. ಪ್ರಾಯಶಃ ಕೇರಳದ ಮಲಬಾರ್ ಮತ್ತು ದಕ್ಷಿಣ-ಕನ್ನಡ ಕರಾವಳಿಗಳ ಮೂಲಕ ನಡೆಯುತಿದ್ದ ರೋಮನ್‌ರ ವ್ಯಾಪಾರಗಳು ಬೆಂಗಳೂರು ಪರಿಸರದ ಮೂಲಕ ದಕ್ಷಿಣ ಭಾರತದ ಅರಿಕಮೇಡು, ದಕ್ಷಿಣದ ಆಂಧ್ರ ಪ್ರದೇಶ ಮತ್ತು ತಮಿಳುನಾಡಿನ ಪ್ರದೇಶಗಳೊಂದಿಗೆ ನಡೆಯುತ್ತಿತ್ತು. ಒಟ್ಟಿನಲ್ಲಿ ಬೆಂಗಳೂರು ಪರಿಸರದಲ್ಲಿ ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಗಳು ದಕ್ಷಿಣದ ಕಾವೇರಿ ಮತ್ತು ಉತ್ತರದ ಬಯಲುಸೀಮೆಯ ಸಂಸ್ಕೃತಿಗಳಿಗೆ ಜೋಡಿಸುವ ಒಂದು ಸಾಂಸ್ಕೃತಿಕ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತಿತ್ತೆಂದು ಗುರುತಿಸಬಹುದು.

**ಕೃತಜ್ಞತೆಗಳು:** ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಆಯೋಜಿಸಿದ್ದ 'ಬೆಂಗಳೂರು ನಮ್ಮ ಅರಿವು' ಕಾರ್ಯಕ್ರಮದಲ್ಲಿ ನೀಡಿದ ಉಪನ್ಯಾಸದ ಪರಿಷ್ಕೃತ ಆವೃತ್ತಿ ಇದು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ತಿಮ್ಮೇಶ್ ಅವರಿಗೆ ಹಾಗೂ ಈ ಕಾರ್ಯಕ್ರಮದ ಸಂಯೋಜಕರಾದ ಡಾ॥ ಹೆಚ್. ಎಸ್. ಗೋಪಾಲರಾವ್ ಅವರಿಗೆ ಈ ಅವಕಾಶಕ್ಕಾಗಿ ವಂದನೆಗಳು. ಈ ಲೇಖನ ಸಿದ್ಧಪಡಿಸುವಲ್ಲಿ ಸೂಕ್ತ ಸಲಹೆ ನೀಡಿದ ಸ್ನೇಹಿತರೂ ಮೈಸೂರು ವಿಶ್ವವಿದ್ಯಾಲಯದ ಪುರಾತತ್ವ ವಿಭಾಗದ ಸಹ-ಪ್ರಾಧ್ಯಾಪಕರೂ ಆದ ಡಾ॥ ಜಿ. ಶೋಭಾ ಅವರಿಗೂ, ಬೆಂಗಳೂರು ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಸಹ-ಪ್ರಾಧ್ಯಾಪಕರಾದ ಡಾ॥ ಅಶ್ವತ್ಥನಾರಾಯಣ ಅವರಿಗೂ ಹಾಗೂ ಲೇಖನದ ಕರಡು ತಿದ್ದುವಲ್ಲಿ ಮತ್ತು ಸೂಕ್ತ ಮಾಹಿತಿಗಳನ್ನು ಒದಗಿಸಿಕೊಡುವಲ್ಲಿ ನೆರವಾದ ಈ ಪತ್ರಿಕೆಯ ಸಂಪಾದಕರಾದ ಹಂ.ಗು. ರಾಜೇಶ್ ಅವರಿಗೂ ಮತ್ತು ಸ್ನೇಹಿತರಾದ ಮಿಥಿಕ್ ಸೊಸೈಟಿಯ ಶ್ರೀ ಜಯಸಿಂಹ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

## ಪರಾಮರ್ಶನ ಗ್ರಂಥಗಳು

### ಇಂಗ್ಲಿಷ್

- *Archaeological Survey of Mysore- Annual Reports* (i.e. ***MAR***) (from 1885 to 1956.)
- Branfill. B.R.1881. 'On the Savandurga Rude Stone Cemetry. Central Maisur' *Indian Antiquary Vol.* 2. Pp. 1-12.
- Buchanan, Francis. 1807. *A Journey from Madras Through the Countries of Mysore, Canara and Malbar.* In 3Vols. (London). (Reprinted in 1988 by Asian Educational Services, Delhi)

- Clark, John. 1839. 'Geology of Bangalore and some Portions of Mysore'. *The Madras Journal of Literary & Science* Vol. 9.
- Cole, Robert. 1873. 'Cromleches in Maisur'. *Indian Antiquary.* Vol. 2. Pp.86-88.
- Darshana, S.B. 1997. *Protohistoric Investigations in the Upper Palar Basin (Tamil Nadu).* (Unpublished Ph.D. Thesis, Deccan College PG & Research Institute, Pune).
- *Epigraphia Carnatica* [old series] Ed. by B.L. Rice Vol.**X**. [Kolar District] **CB-29.**
- Gordon, D.H. 1945. 'Archaeological Miscellany'. *Journal of Indian Anthropological Institute (New Series)* Vol. 1. Pp.28-30.
- Greson, C.D. 1909-10. 'Stone Barrows near Bangalore'. *Quarterly Journal of the Mythic Society,* Vol. 1 (4), pp.152-53.
- Home, Robert. 1794. *Select Views in Mysore- The Country of Tipoo Sultan from Drawings taken on the Spot with Historical Descriptions.* London.
- *Indian Archaeology- A Review* (*IAR*) (volumes from 1953-54 to 2001-2002)
- Krishnamurthy, C. 1990. 'Banahalli: A Neolithic Site'. *Archaeology in Karnataka-* Papers Presented at the *National Seminar on Archaeology, 1985)* (Ed. by A. Sundara and K.G. Bhatsoori). Mysore: Directorate of Archaeology & Museums. Pp. 67-84.
- Nagarja Rao, M.S. 1978. *Progress of Archaeology in Karnataka 1956-1972.* Mysore: Directorate of Archaeology & Museum, Mysore.
- Rama Rao, G. 1939. *An Introduction of Geology of Mysore.* (Mysore Geological Department Popular Series No-1). Bangalore: Govt. Press.
- Rice, B.L. (Ed.). 1891. *Find of Roman Coins near Bangalore,* Mysore: Archaeological Survey of Mysore.
- Seshadri. M. 1955. 'The Palaeolithic Industry of Kibbanahalli, Mysore State'. *Artibus Asiae.* Vol.18. No. 3-4. pp. 271-287.
- Seshadri, M. 1956. *The Stone Use Cultures of Prehistoric and Protohistoric Mysore.* Mysore: University of Mysore.
- Seshadri, M. 1960. *Report on the Jadigenahalli Megalithic Excavations for the year 1957.* Mysore: Directorate of Archaeology, Govt. of Mysore.
- Srikantaiah, S. 1939-40. 'A Note on the Terracotta Figures at Pondicherry'. *Quarterly Journal of the Mythic Society.* Vol. 30 (3), pp. 362-363.
- Sundara, A. (Ed.). 1989. *Annual Reports of the Archaeological Department for the Years 1885-1905.* Mysore: Directorate of Archaeology & Museums, Govt. of Karnataka.
- Todd, K.R.U. 1948. 'A Microlithic Industry in Eastern Mysore'. *Man* Vol. 48. Pp.28-30.
- Wheeler, R.E.M. 1946. 'Arikamedu: an Indo-Roman Trading-station on the East Coast of India' *Ancient India- Journal of the Archaeological Survey of India.* Vol. 2. Pp.17-124.

- Wheeler, R.E.M. 1947-48. 'Brahmagiri and Chandravalli 1947- Megalithic and Other Cultures in Chitaldrug District, Mysore State' *Ancient India- Journal of the Archaeological Survey of India.* Vol. 4. Pp.180-310.
- Wilks, Mark. 1810. *Historical Sketches of the South India- in an Attempt to Trace the History of Mysore from the Origin of the Hindoo Government of that State to the Extinction of the Mohammedan Dynasty in 1799.* (2 vols.). London. (Reprint in 1989 by the Asian Educational Services, Delhi).

## ಕನ್ನಡ

- ಕೃಷ್ಣಮೂರ್ತಿ, ಪಿ. ವಿ. ೨೦೦೯. **ಬಾಣರಸರ ಶಾಸನಗಳು**. ಬೆಂಗಳೂರು: ಸಿ.ವಿ.ಜಿ. ಪಬ್ಲಿಕೇಷನ್.
- ಕೃಷ್ಣಮೂರ್ತಿ, ಎಂ. ಎಸ್. ಮತ್ತು ಮಹದೇವಯ್ಯ, ಎಂ.ಪಿ. ೨೦೦೨. 'ಕರ್ನಾಟಕದ ಬೌದ್ಧಧರ್ಮದ ಮೇಲೆ ಹೊಸ ಬೆಳಕು– ರಾಜಘಟ್ಟ ಉತ್ಖನನ'. ಇತಿಹಾಸ ದರ್ಶನ, ಸಂ.೧೭. ಪು.೧–೧೧.
- ಕೃಷ್ಣಮೂರ್ತಿ, ಎಂ.ಎಸ್. ಮತ್ತು ಮಹದೇವಯ್ಯ, ಎಂ.ಪಿ. ೧೯೯೯. ಕಲ್ಲ ಸೇವೆ/ಕಲ್ಲೇವೆ (ಕಲ್ಲು + ಸೇವೆ)– ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಪರಂಪರೆಯೆ?'. ಇತಿಹಾಸ ದರ್ಶನ ಸಂ.೧೪. ಪು.೧–೩.
- ಕೊಂಡಾರೆಡ್ಡಿ, ದೇವರ. ೧೯೯೩, 'ಬನ್ನೇರುಘಟ್ಟ–ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ'. ಇತಿಹಾಸ ದರ್ಶನ ಸಂ. ೮, ಪು. ೩–೫.
- ಗೋಪಾಲರಾವ್, ಎಚ್. ಎಸ್. ೧೯೯೪. 'ಬೃಹತ್ ಶಿಲಾಯುಗದಿಂದ ೧೬ನೆಯ ಶತಮಾನದವರೆಗೆ ಹೂಜಿಗಲ್ಲು– ಒಂದು ಶೋಧ'. ಇತಿಹಾಸ ದರ್ಶನ ಸಂ. ೯, ಪು. ೩–೫.
- ಜಯರಾಮಯ್ಯ, ಜೆ.ಟಿ. ೧೯೯೮. 'ಬಂಡೆಚಿಕ್ಕಹಳ್ಳಿಯ ಶಿಲಾಯುಗದ ಸಮಾಧಿಗಳು– ಶೋಧನೆ'. ಇತಿಹಾಸ ದರ್ಶನ ಸಂ.೧೩. ಪು.೧೧.
- ಬೈರೇಗೌಡ, ಎಂ. ೨೦೦೨. 'ರಾಮನಗರ ತಾಲ್ಲೂಕಿನ ಪುರಾತತ್ತ್ವ ಅವಶೇಷಗಳು'. ಇತಿಹಾಸ ದರ್ಶನ ಸಂ.೧೭. ಪು.೨೯–೩೬.
- ಮಂಜುನಾಥ, ಎಂ. ಜಿ. [೧೯೯೫] 'ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನವಶೋಧಿತ ಬೃಹತ್ ಶಿಲಾ ನಿವೇಶನಗಳು'. ಇತಿಹಾಸ ದರ್ಶನ ಸಂ.೧೦. ಪು.೧೮–೨೦.
- ಮುತ್ತುರಾಜು. ೧೯೯೬. 'ಕನಕಪುರ ತಾಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾಗೋರಿಗಳು– ಹೊಸ ಶೋಧನೆ'. ಇತಿಹಾಸ ದರ್ಶನ ಸಂ.೧೧. ಪು.೩೯–೪೩.
- ಮುತ್ತುರಾಜು. ೧೯೯೮. 'ಮಾರನಾಯಕನಹಳ್ಳಿ ಮತ್ತು ವಿದ್ಯಾನಗರ: ಬೃಹತ್ ಶಿಲಾಯುಗದ ಸ್ಥಳಗಳು (ಕೃ.ಪೂ. ೮೦೦)–ಒಂದು ಶೋಧ'. ಇತಿಹಾಸ ದರ್ಶನ ಸಂ.೧೨. ಪು.೧೪–೧೫.
- ಲೋಕೇಶ, ಎಂ.; ಮರಿದೇವರು ಎಂ.ಎಸ್. ಮತ್ತು ಅರವಿಂದ ಎಸ್. ೧೯೯೮. 'ಬೃಹತ್ ಶಿಲಾಯುಗದ ನೆಲೆಯಾಗಿ ಮೋಟಗಾನಹಳ್ಳಿ'. ಇತಿಹಾಸ ದರ್ಶನ ಸಂ.೧೩. ಪು.೯–೧೦.
- ಶೆಟ್ಟರ್, ಷ. ೨೦೦೭. *ಶಂಗಂ ತಮಿಳಗಂ ಕನ್ನಡ ನಾಡು–ನುಡಿ ಆರಂಭ ಕಾಲದ ದ್ರಾವಿಡ ಸಂಬಂಧದ ಚಿಂತನೆ*. ಬೆಂಗಳೂರು:ಅಭಿನವ ಪ್ರಕಾಶನ.
- ಶ್ರೀನಿವಾಸಮೂರ್ತಿ ಎಸ್. ಎಲ್. ೨೦೧೧. ಪುರಾತತ್ತ್ವ ಪಿತಾಮಹಾ ಬಿ. ಎಲ್. ರೈಸ್– ಜೀವನ ಮತ್ತು ಸಾಧನೆ. ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ.
- ಸಾಸಲು, ವಿಶ್ವನಾಥ ಜೆ. ೧೯೯೯. 'ದೊಡ್ಡಬಳ್ಳಾಪುರ ಹಾಗೂ ದೇವನಹಳ್ಳಿಯ ನವಶೋಧಿತ ಶಿಲಾಯುಗ ಸಂಸ್ಕೃತಿಯ ಸ್ಮಾರಕಗಳು ಮತ್ತು ರೇಖಾಚಿತ್ರಗಳು'. ಇತಿಹಾಸ ದರ್ಶನ ಸಂ.೧೪. ಪು.೧೧–೧೨.
- ಸಾಸಲು, ವಿಶ್ವನಾಥ ಜೆ. ೨೦೦೩. 'ಬೃಹತ್ ಶಿಲಾಸಂಸ್ಕೃತಿಯ ಕೆಲವು ಹೊಸ ಸಂಗತಿಗಳು'. ಇತಿಹಾಸ ದರ್ಶನ ಸಂ.೧೮. ಪು.೭–೮.
- ಸೀತಾರೆಡ್ಡಿ, ಡಿ. ೧೯೯೭. 'ಆನೇಕಲ್ ತಾಲೂಕಿನ ಮೇಲೂರು ದಿನ್ನೆ ಹಾಗೂ ಕಾಳನಾಯಕನಹಳ್ಳಿಯ ಶಿಲಾಯುಗದ ನಿವೇಶನಗಳು'. ಇತಿಹಾಸ ದರ್ಶನ ಸಂ.೧೧. ಪು.೨೩–೨೫.


■

# ಅಬ್ರಹಾಂ ಬಿನ್ ಯೀಯೂ

–ಮನು ವಿ. ದೇವದೇವನ್

ಅಬ್ರಹಾಂ ಬಿನ್ ಪೆರಹ್ಯಾ ಬಿನ್ ಯೀಯೂ ಎಂಬ ಹನ್ನೆರಡನೆಯ ಶತಮಾನದ ಯಹೂದಿ ವ್ಯಾಪಾರಿಯನ್ನು ಕನ್ನಡದ ಓದುಗರಿಗೆ ಪರಿಚಯಿಸುವುದು ಈ ಲೇಖನದ ಉದ್ದೇಶ. ದಕ್ಷಿಣ ಭಾರತದ ಆರ್ಥಿಕ ಚರಿತ್ರೆ ಹಾಗೂ ಇಂಡಿಯನ್ ಓಷನ್ ಪ್ರದೇಶದ ಮ್ಯಾರೀಟೈಮ್ ಚರಿತ್ರೆಯ ವಿದ್ಯಾರ್ಥಿಗಳಿಗೆ ಇವನ ಹೆಸರು ಹೊಸದೇನಲ್ಲ. ತಮ್ಮ ಅಧ್ಯಯನಗಳಲ್ಲಿ ಎಸ್.ಡಿ.ಗೊಯ್ತಿಯೇನ್ ಹಾಗೂ ಎಂ.ಎ.ಫ್ರೀಡ್‌ಮನ್ ಇವನ ಬದುಕಿನ ಸ್ಥೂಲ ಚಿತ್ರವೊಂದನ್ನು ಬಿಡಿಸಲು ಪ್ರಯತ್ನಿಸಿದ್ದಾರೆ (S.D Goitein and Mordechai Akiva Friedman 2007: ೫೨–೮೯). ಕಳೆದ ಹಲವು ವರ್ಷಗಳಿಂದ ಇವನ ವಿಷಯವಾಗಿ ಮಹತ್ವದ ಅಧ್ಯಯನವೊಂದನ್ನು ಕೈಗೊಂಡಿರುವ ಎಲಿಸಬೆತ್ ಲ್ಯಾಂಬೋನ್ ಅವರು ಸದ್ಯದಲ್ಲಿ ಅದನ್ನು ಪುಸ್ತಕರೂಪದಲ್ಲಿ ಪ್ರಕಟಿಸಲಿದ್ದಾರೆ. ಅಲ್ಲದೆ ಕೇರಳದ ಯಹೂದಿ ವರ್ತಕರ ಬಗ್ಗೆ ಈ ಲೇಖಕ ಹಾಗೂ ಕೇಶವನ್ ವೆಳುತ್ತಾಟ್ ಅವರು ಇದೀಗ ಕೈಗೊಂಡಿರುವ ಜಂಟಿ ಅಧ್ಯಯನದಲ್ಲಿ ಬಿನ್ ಯೀಯೂ ವಿಶೇಷ ಚರ್ಚೆಗೆ ಪಾತ್ರನಾಗಿದ್ದಾನೆ. ಬಿನ್ ಯೀಯೂನ ಖ್ಯಾತಿ ಆರ್ಥಿಕ ಚರಿತ್ರೆಯ ಓದುಗರಿಗಷ್ಟೇ ಸೀಮಿತವಲ್ಲ. ಅಮಿತಾಭ್ ಘೋಷ್‌ರ ಇನ್ ಎನ್ ಆಂಟಿಕ್ ಲ್ಯಾಂಡ್ ಕಾದಂಬರಿಯ ಮೂಲಕ ಸಾಹಿತ್ಯಾಸಕ್ತರ ಕುತೂಹಲವನ್ನು ಇವ ಕೆರಳಿಸಿದ್ದಾನೆ.

ಬಿನ್ ಯೀಯೂನ ಜೀವನ ವೃತ್ತಾಂತ ಕೂಲಂಕುಶವಾದ ಸಮೀಕ್ಷೆ ಅರಸುತ್ತದೆ. ವರ್ತಕರ ವ್ಯವಹಾರ, ಕಡಲು ವ್ಯಾಪಾರ, ಆಧುನಿಕ ಪೂರ್ವ ಯುಗದಲ್ಲಿನ ಆರ್ಥಿಕ ಸಂಕ್ರಮಣಗಳು, ನೌಕಾ ತಂತ್ರಜ್ಞಾನ,

ಉತ್ಪಾದನೆ, ವಿನಿಮಯದ ವಿಧಾನಗಳು, ಬಂಡವಾಳ, ನಿವೇಶನ, ಉದ್ದಿಮೆ, ವೃತ್ತಿ, ಇಂಥ ಹತ್ತು ಹಲವು ವಿಚಾರಗಳ ಬಗ್ಗೆ ನಮ್ಮಲ್ಲಿ ಚಾಲ್ತಿಯಲ್ಲಿರುವ ಅನೇಕ ತೆಳುವಾದ ಧೋರಣೆಗಳನ್ನು ಅಂತಹ ಸಮೀಕ್ಷೆಯ ಮೂಲಕ ಅಲ್ಲಗಳೆಯಬಹುದು. ಆದರೆ ಈಗಾಗಲೇ ಹೇಳಿದಂತೆ ಇದೊಂದು ಪರಿಚಯಾತ್ಮಕ ಲೇಖನ. ವಚನಗಳು, ಶಾಸನಗಳೇ ಮೊದಲಾದ ನಮ್ಮ ಖಾಯಂ ಆಕರಗಳಲ್ಲಿ ದೊರಕದ ಹಲವು ವಿಶಿಷ್ಟ ಮಾಹಿತಿಯನ್ನು ಓದುಗರ ಮುಂದಿಡುವುದಷ್ಟೇ ಪ್ರಸ್ತುತ ಲೇಖನದ ಗುರಿಯಾಗಿದೆ. ಆದ್ದರಿಂದ ಇಲ್ಲಿ ಯಾವುದೇ ಸಮೀಕ್ಷೆಯನ್ನು ಕೈಗೊಳ್ಳಲಾಗಿಲ್ಲ.

ಕೇಂಬ್ರಿಜ್ ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದಲ್ಲಿರುವ ಗೆನೀಸಾ ಪತ್ರಗಳಲ್ಲಿ ನಮಗೆ ಅನೇಕ ವ್ಯಾಪಾರಿಗಳ ಕುರಿತು ಮಾಹಿತಿ ದೊರಕುತ್ತದೆ. ಈ ವ್ಯಾಪಾರಿಗಳಲ್ಲಿ ಬಿನ್ ಯೀಯೂ ಒಬ್ಬ. ಇವನು ಬರೆದ ಹಾಗೂ ಇವನಿಗೆ ಬರೆಯಲಾದ ಎಪ್ಪತ್ತಕ್ಕೂ ಹೆಚ್ಚು ಪತ್ರಗಳು ಗೆನೀಸಾ ಭಂಡಾರದಲ್ಲಿವೆ. ಹೀಬ್ರೂ ಹಾಗೂ ಅರಬ್ ಭಾಷೆಗಳಲ್ಲಿ ಬರೆಯಲಾದ ಈ ಪತ್ರಗಳೇ ಇವನ ಬಗ್ಗೆ ಅಧ್ಯಯನ ಕೈಗೊಳ್ಳಲು ನಮ್ಮಲ್ಲಿರುವ ಮೂಲ ಆಕರ.

ಬಿನ್ ಯೀಯೂ ತುನೀಶ್ಯಾದ ಅಲ್ ಮೆಹದಿಯಾ ನಗರಕ್ಕೆ ಸೇರಿದವನು (ಅದೇ, ೫೨). ಇವನ ತಂದೆ ಪೆರಹ್ಯಾ. ಈ ಹೆಸರು ಅರಬ್ ಭಾಷೆಯಲ್ಲಿ ಅಬುಲ್ ಸುರೂರ್ ಹಾಗೂ ಹೀಬ್ರೂನಲ್ಲಿ ಸಿಂಹಾ ಎಂದಾಗುತ್ತದೆ (ಅದೇ, ೫೪). ಹೀಬ್ರೂನಲ್ಲಿ ಪೆರಹ್ಯಾನ ಮತ್ತೊಂದು ರೂಪ ಯಿಫ್ತಃ. ಬಿನ್ ಯೀಯೂನ ಅಜ್ಜನ ಹೆಸರು ನಾಥನ್ (ಅದೇ, ೫೨). ಇವನ ಮತ್ತೊಂದು ಹೆಸರು ಯೀಯೂ (ಅದೇ.). ಬಿನ್ ಯೀಯೂ ತನ್ನನ್ನು ಕೆಲವೆಡೆಗಳಲ್ಲಿ ಪೆರಹ್ಯಾನ (ಯಿಫ್ತಃನ) ಮಗ ಎಂದು ಕರೆದುಕೊಂಡಿದ್ದರೆ ಹೆಚ್ಚಿನೆಡೆಗಳಲ್ಲೂ ಯೀಯೂನ ಮಗ ಎಂದೇ ಗುರುತಿಸಿಕೊಂಡಿದ್ದಾನೆ. ಇತರರಿಗೆ ಇವನು ಸದಾ ಬಿನ್ ಯಿಯೂ. ಖಲಾಫ್ ಬಿನ್ ಇಸ್ಹಾಕ್ ಎಂಬ ವ್ಯಾಪಾರಿ ತನ್ನ ಪತ್ರಗಳಲ್ಲಿ ಇವನನ್ನು ಶೇಕ್ ಎಂದೂ (ಉದಾ: ಅದೇ, ೫೯೬, ೬೧೫.) ಕೆಲವೊಮ್ಮೆ ಶೇಕ್ ಅಬೂ ಇಸ್ಹಾಕ್ ಎಂದೂ (ಅದೇ, ೬೦೫, ೬೦೮) ಸಂಬೋಧಿಸಿರುವುದು ಗಮನಾರ್ಹವಾಗಿದೆ.

ಬಿನ್ ಯೀಯೂನ ತಾಯಿತಂದೆಯರ ವಿಷಯವಾಗಿ ನಮ್ಮಲ್ಲಿ ಹೆಚ್ಚಿನ ಮಾಹಿತಿಯಿಲ್ಲ. ತಂದೆ ಪೆರಹ್ಯಾ ಓರ್ವ ಲಿಪಿಕಾರನಾಗಿದ್ದ (ಅದೇ, ೫೪). ತಂದೆಯ ಬಳಿ ಇವನು ಲಿಪಿಕಾರ ಶಿಕ್ಷಣ ಪಡೆದಂತೆ ತೋರುತ್ತದೆ. ಇವನಿಗೊಬ್ಬ ಸೋದರಿಯಿದ್ದಳು, ಬೆರಾಖಾ. ಅಲ್ಲದೆ ಇಬ್ಬರು ಸೋದರರು. ಜೋಸೆಫ್ ಮತ್ತು ಮೆವಸ್ಸೆರ್ ಯೀಯೂ. ಇವನ ಆರಂಭ ಕಾಲದ ವಹಿವಾಟುಗಳ ಕುರಿತು ಆಕರಗಳ ಕೊರತೆಯಿಂದಾಗಿ ಏನನ್ನೂ ಹೇಳಲಾಗದು. ತುನೀಸಿಯಾದಿಂದ ಮಿಸ್ರ್ (ಈಜಿಪ್ಟ್) ಮಾರ್ಗವಾಗಿ ಯಮನ್ ದೇಶದ ಬಂದರು ಪಟ್ಟಣವಾದ ಅದನ್ ತಲುಪಿ ಅಲ್ಲಿ ವ್ಯಾಪಾರ ಸಂಬಂಧಗಳನ್ನು ಸ್ಥಾಪಿಸಿದ ಬಳಿಕ ಮಂಗಳೂರಿಗೆ (ಮಂಜರೂರ್/ಮಂಜೂರ್‌ಗೆ) ಹೊರಟನೆಂಬುದು ಮಾತ್ರ ಖಚಿತವಾಗಿದೆ. ಸುದೃಢವಾದ ಆರ್ಥಿಕ ಹಿನ್ನೆಲೆ ಇಲ್ಲದಿದ್ದುದರಿಂದ ವ್ಯಾಪಾರಕ್ಕೆ ಅಗತ್ಯವಾದ ಬಂಡವಾಳವನ್ನು ಇವನು ಸ್ವಂತ ಪ್ರಯತ್ನದಿಂದ- ಬಹುಶಃ ಅದನ್‌ನಲ್ಲಿದ್ದಾಗ - ಸಂಪಾದಿಸಿದನೆಂದು ಹೇಳಬಹುದು.

ಬಿನ್ ಯೀಯೂ ಮಂಗಳೂರಿನಲ್ಲಿ ನೆಲೆಸಿದ್ದು ಯಾವಾಗ ಎಂದು ಸ್ಪಷ್ಟವಾಗಿ ಹೇಳಲಾಗಿದು. ಇವನ ಕುರಿತು ನಮಗೆ ಸಿಗುವ ಮೊಟ್ಟಮೊದಲ ದಾಖಲೆ ಕ್ರಿ.ಶ.೧೧೩೨ಕ್ಕೆ ಸೇರಿದ್ದು. ೧೧೩೨ ಅಕ್ಟೋಬರ್ ೧೭ರಂದು ಬರೆದ ಪತ್ರವೊಂದರಲ್ಲಿ ಅಶೂ ಎಂಬ ತುಳುದೇಶದ ತನ್ನ ಗುಲಾಮಳನ್ನು ಗುಲಾಮಗಿರಿಯಿಂದ ಮುಕ್ತಗೊಳಿಸುತ್ತಿರುವುದಾಗಿ ಹೇಳಿದ್ದಾನೆ (ಅದೇ, ೬೩೨). ಆಕೆಯನ್ನು ವರಿಸಿಕೊಳ್ಳಲು ನಿಶ್ಚಯಿಸಿದ ಬಳಿಕ ತೆಗೆದುಕೊಂಡ ನಿರ್ಣಯವಿದು. ಕ್ರಿ.ಶ ೧೧೪೯ರ ವರೆಗೂ ಬಿನ್ ಯೀಯೂ ಮಂಗಳೂರಿನಲ್ಲಿದ್ದ. ೧೧೪೯ ಸೆಪ್ಟಂಬರ ೧೧ರಂದು ಆದನ್‌ನಿಂದ ತನ್ನ ಸೋದರರಿಗೆ ಬರೆದ ಪತ್ರದಲ್ಲಿ ತಾನು ಭಾರತದಲ್ಲಿನ ವ್ಯವಹಾರಗಳನ್ನು ತೊರೆದು ಮರಳಿ ಬಂದಿರುವುದಾಗಿ ಹೇಳಿಕೊಂಡಿದ್ದಾನೆ (ಅದೇ, ೭೧). ಈ ಸೂಚನೆಗಳು ಬಿನ್ ಯೀಯೂ ಕರ್ನಾಟಕದ ಕರಾವಳಿಯಲ್ಲಿ ವ್ಯವಹರಿಸಿದ ಕಾಲವು ಹನ್ನೆರಡನೆಯ ಶತಮಾನದ ನಾಲ್ಕನೆಯ ಹಾಗೂ ಐದನೆಯ ದಶಕಗಳೆಂದು ಸ್ಪಷ್ಟಪಡಿಸುತ್ತವೆ.

ಯಹೂದಿ ಧರ್ಮದ ಪ್ರಕಾರ ಗುಲಾಮರನ್ನು ಮುಕ್ತಗೊಳಿಸುವುದು ಪುಣ್ಯಕಾರ್ಯ. ಈ ಪುಣ್ಯ ಪ್ರಾಪ್ತಿಗೆಂದೇ ಗುಲಾಮರಿಲ್ಲದ ಬಿನ್ ಯೀಯೂ ಅಶೂಳನ್ನು ಗುಲಾಮಳಾಗಿ ಖರೀದಿಸಿ ಕೂಡಲೆ ಮುಕ್ತಗೊಳಿಸಿರಬಹುದೆಂದು ಫ್ರೀಡ್‌ಮನ್ ಊಹಿಸಿದ್ದಾರೆ (ಅದೇ, ೫೬). ವಿವಾಹವಾಗುವ ಮುನ್ನ ಬಿನ್ ಯೀಯೂ ಆಕೆಯನ್ನು ಯಹೂದಿಯಾಗಿ ಮತಾಂತರಗೊಳಿಸಿದರೂ ಯಹೂದಿ ಸಮುದಾಯದಲ್ಲಿ ಆ ವಿವಾಹಕ್ಕೆ ಮನ್ನಣೆ ದೊರೆತಂತೆ ತೋರುವುದಿಲ್ಲ. ರೂಬೆನ್ ಎಂಬ ಕಲ್ಪಿತ ವ್ಯಕ್ತಿಯ ಕಥನದ ಮೂಲಕ ಬಿನ್ ಯೀಯೂ ಈ ಕುರಿತು ಸ್ಪಷ್ಟನೆ ನೀಡಲು ಶ್ರಮಿಸಿದ್ದಾನೆ. ವಿವಾಹದ ವೇಳೆಗೆ ಅಶೂ ಯಹೂದಿ ಯಾಗಿದ್ದರೂ, ಗುಲಾಮಳಾಗಿರುವಾಗಲೇ ಆಕೆಯನ್ನು ವಿವಾಹವಾಗಲು ಬಿನ್ ಯೀಯೂ ನಿಶ್ಚಯಿಸಿದ್ದೇ ವಿವಾದಕ್ಕೆ ಕಾರಣ. ವಿವಾಹವಾಗಲು ನಿಶ್ಚಿಯಿಸಿದ ಸಮಯದಲ್ಲಿ ಅಶೂ ಇನ್ನೂ ಯಹೂದಿಯಾಗಿರಲಿಲ್ಲ, ಯಹೂದಿಯಲ್ಲದ ವ್ಯಕ್ತಿಯನ್ನು ವಿವಾಹವಾಗಲು ನಿಶ್ಚಿಯಿಸಿದ್ದರಿಂದ ಬಳಿಕ ಆಕೆ ಮತಾಂತರ ಹೊಂದಿದರೂ ಆ ವಿವಾಹವು ಧರ್ಮ ಬಾಹಿರ ಎಂಬುದು ಯಹೂದಿ ಮತಪಂಡಿತರ ನಿಲುವಾಗಿತ್ತು (ಅದೇ, ೭೩-೭೪). ಈ ವಿವಾದವು ಬಿನ್ ಯೀಯೂನ ವೈಯ್ಯಕ್ತಿಕ ಬದುಕಿನಲ್ಲಿ ಸಾಕಷ್ಟು ಅಸಮಾಧಾನ ತಂದಂತೆ ತೋರುತ್ತದೆ.

ಇನ್ನೂ ಹಲವು ವ್ಯಕ್ತಿಗತ ದುರಂತಗಳು ಬಿನ್ ಯೀಯೂನನ್ನು ಸದಾ ಕಾಡಿದ ವಿಷಯ ಪತ್ರಗಳಿಂದ ತಿಳಿಯಬಹುದು. ಮತಾಂತರದ ಬಳಿಕ ಬೆರಾಖಾ ಎಂಬ ಹೆಸರು ಸ್ವೀಕರಿಸಿದ ಅಶೂ ಮೂರು ಜನ ಮಕ್ಕಳನ್ನು ಪಡೆದಳು. ಇವರಲ್ಲಿ ಮೊದಲ ಎರಡು ಗಂಡು ಮಕ್ಕಳು ಬಾಲ್ಯದಲ್ಲೇ ಅಸುನೀಗಿದರು. ಬಳಿಕ ಒಬ್ಬ ಮಗಳು ಜನಿಸಿದಳು. ಸಿತ್ ಅಲ್ ದಾರ್.

ಭಾರತ ಬಿಟ್ಟು ಬಿನ್ ಯೀಯೂ ಆದನ್ ತಲುಪುವ ಹೊತ್ತಿಗೆ ಇವನ ಸೋದರಿ ಸೋದರರು ಅಲ್ ಮೆಹದಿಯಾದಿಂದ ಮೆಡಿಟರೇನಿಯನ್ ಸಮುದ್ರದ ಸಿಸಿಲಿ ದ್ವೀಪಕ್ಕೆ ವಲಸೆ ಹೋಗಿದ್ದರು (ಅದೇ, ೭೨). ಬಿನ್ ಯೀಯೂಗೆ ಈ ವಿಷಯ ತಿಳಿದಿರಲಿಲ್ಲ. ಹೀಗಾಗಿ ಅವರನ್ನು ಪತ್ತೆ ಹಚ್ಚುವಲ್ಲಿ ಇವನ ಶ್ರಮ ಸಾಕಷ್ಟು ವ್ಯಯವಾದಂತೆ ತೋರುತ್ತದೆ.

ಇವರಿಗೆ ಬರೆದ ಪತ್ರವೊಂದರಲ್ಲಿ ವಿಳಾಸವನ್ನು "ಅಲ್ ಮೆಹದಿಯಾದಲ್ಲಿ, ದೈವೇಚ್ಛೆಯಿಂದ ಅಥವಾ ಇಫ್ರೀಕಿಯಾದಲ್ಲಿ* ಎಲ್ಲೇ ಇದ್ದರೂ ಅಲ್ಲಿ" ಎಂದು ಬರೆದಿರುವುದನ್ನು ಕಾಣುತ್ತೇವೆ (ಅದೇ). ಯಾವುದೋ ದೊಡ್ಡ ಬಿಕ್ಕಟ್ಟಿಗೆ ಸಿಕ್ಕಿಬಿದ್ದುದ್ದೇ ಇವನ ಸೋದರಿ ಸೋದರರು ಸಿಸಿಲಿ ಸೇರಲು ಕಾರಣವಾಗಿತ್ತು. ಅದು ಎಂಥ ಬಿಕ್ಕಟ್ಟೆಂದು ಆಕರಗಳು ತಿಳಿಸುವುದಿಲ್ಲ.

ಜೋಸೆಫ್ ಸಿಸಿಲಿಯಲ್ಲಿ ಅಧ್ಯಾಪಕ ವೃತ್ತಿ ಆರಂಭಿಸಿದ. ಆತನದು ಬಡತನದ ಬಾಳ್ವೆಯಾಗಿತ್ತು. ಅಲ್ ಮೆಹದಿಯಾದಲ್ಲಿರುವಾಗಲೂ ಆತನ ಆರ್ಥಿಕ ಸ್ಥಿತಿ ದುರ್ಬಲವೇ ಆಗಿತ್ತು. ಬಿನ್ ಯೀಯೂ ಆತನಿಗೆ ಆ ದಿನಗಳಲ್ಲಿ ಆರ್ಥಿಕ ನೆರವು ನೀಡಿದ ಉಲ್ಲೇಖವು ಪತ್ರವೊಂದರಲ್ಲಿ ಕಂಡು ಬರುತ್ತದೆ (ಅದೇ). ಪ್ರತಿ ವರ್ಷ ಇಪ್ಪತ್ತು ಸಿಸಿಲಿಯನ್ ದೀನಾರ್ ಹಾಗೂ ಅರ್ಧ ಡ್ಯೂಕನ್ ರುಬಾಯಿ ದರದಲ್ಲಿ ಉಮ್ಮಲ್ ಇಸ್ ದೀನ್ ಸೂರಾ ಎಂಬುವನಿಂದ ನಲವತ್ತು ವರ್ಷಗಳ ಅವಧಿಗೆ ಮನೆಯನ್ನು ಬಾಡಿಗೆಗೆ ಕೊಂಡ ಜೋಸೆಫ್ (ಅದೇ) ತನ್ನ ಮೂರು ಜನ ಗಂಡು ಮಕ್ಕಳಲ್ಲಿ ಒಬ್ಬನಾದ ಪೆರಹ್ಯಾಗೆ ಉತ್ತಮ ಶಿಕ್ಷಣ ನೀಡುವಲ್ಲಿ ಯಶಸ್ವಿಯಾದ. ಕಾನೂನು ಕಲಿತು ನ್ಯಾಯಾಧೀಶನಾದ ಪೆರಹ್ಯಾನೊಂದಿಗೆ ಬಿನ್ ಯೀಯೂನ ಮಗಳು ಸಿತ್ ಅಲ್ ದಾರ್‌ಳ ವಿವಾಹವಾಯಿತು (ಅದೇ, ೭೯. ವಂಶವೃಕ್ಷ ನೋಡಿ.).

ಮತ್ತೊಬ್ಬ ಸೋದರ ಮೆವಸ್ಸೇರ್ ಯೀಯೂ ಅಲೆಮಾರಿಯಾಗಿದ್ದ. ಇವನದು ಬೇಜವಾಬ್ದಾರಿಯುತ ಜೀವನವಾಗಿತ್ತು. ಇವನ ಬಗ್ಗೆ ಕಾಲಕಾಲಕ್ಕೆ ಮಾಹಿತಿ ದೊರಕದೆ ಇದ್ದದ್ದೂ ಬಿನ್ ಯೀಯೂನ ಮರುಕಕ್ಕೆ ಕಾರಣವಾಗಿತ್ತು. ಇವನಿಗೂ ಬಿನ್ ಯೀಯೂ ಹಣ ಒದಗಿಸಿಕೊಟ್ಟ ಪ್ರಸಂಗವೊಂದು ಪತ್ರವೊಂದರಲ್ಲಿ ಉಲ್ಲೇಖ ಪಡೆದಿದೆ (ಅದೇ, ೭೩).

ಹನ್ನೆರಡನೆಯ ಶತಮಾನದಲ್ಲಿ ಭಾರತದಿಂದ ಅರಬ್ ದೇಶಗಳಿಗೆ ರಫ್ತಾಗುತ್ತಿದ್ದ ಪ್ರಮುಖ ವಸ್ತುಗಳಲ್ಲೊಂದು ಅಕ್ಕಿ. ಅಲ್ಲಿಂದ ಇಲ್ಲಿಗೆ ಕುದುರೆಗಳು ನಿರಂತರ ಆಮದುಗೊಳ್ಳುತ್ತಿದ್ದವು. ಅಕ್ಕಿ ಹಾಗೂ ಕುದುರೆ ವ್ಯಾಪಾರವನ್ನು ಮುಸ್ಲಿಂ ನಾವಿಕರು ಹಾಗೂ ವರ್ತಕ ಸಂಘಗಳು ತಮ್ಮ ಗುತ್ತಿಗೆಯಾಗಿಸಿಕೊಂಡಿದ್ದವು. ಯಾಹೂದಿಯಾದ ಬಿನ್ ಯೀಯೂಗೆ ಸಂಬಂಧಿಸಿದ ಪತ್ರಗಳಲ್ಲಿ ಎಲ್ಲಿಯೂ ಅಕ್ಕಿ ಅಥವಾ ಕುದುರೆ ವ್ಯಾಪಾರದ ಪರಾಮರ್ಶೆ ಕಂಡುಬರುವುದಿಲ್ಲ.

ಬಿನ್ ಯೀಯೂ ರಫ್ತು ಮಾಡಿದ ಪ್ರಮುಖ ವಸ್ತುಗಳೆಂದರೆ ಮೆಣಸು (ಉದಾ: ಅದೇ, ೫೬೯, ೫೮೩, ೫೯೯, ೬೨೦, ಇತ್ಯಾದಿ.), ಅಡಕೆ (ಅದೇ, ೫೫೭, ೫೬೬, ಇತ್ಯಾದಿ.), ಶುಂಠಿ (ಅದೇ, ೫೬೯, ೬೧೬, ೬೨೦, ಇತ್ಯಾದಿ.), ಏಲಕ್ಕಿ (ಅದೇ, ೫೬೬, ೫೮೩, ೫೯೮, ೬೧೭, ಇತ್ಯಾದಿ.), ಅರಶಿಣ (ಅದೇ, ೫೬೬, ೫೬೯, ಇತ್ಯಾದಿ.) ಮೊದಲಾದ ಸಾಂಬಾರಬೆಳೆ ಉತ್ಪನ್ನಗಳು. ನಿಂಬೆಹಣ್ಣು, ಮಾವಿನಹಣ್ಣುಗಳನ್ನು ಕಳಿಸಿಕೊಟ್ಟ ಉಲ್ಲೇಖಗಳೂ ಗೆನಿಜಾ ಭಂಡಾರದಲ್ಲಿವೆ (ಉದಾ: ಅದೇ, ೫೬೯). ಅಲ್ಲದೆ ಬಿನ್ ಯೀಯೂ ಕಬ್ಬಿಣವನ್ನೂ ದೊಡ್ಡ ಪ್ರಮಾಣದಲ್ಲಿ ರಫ್ತು ಮಾಡುತ್ತಿದ್ದ (ಉದಾ: ಅದೇ,

---

* ಇಫ್ರೀಕಿಯಾ ಎಂದರೆ ಇಂದು ಮಘ್ರಿಬ್ ಪ್ರದೇಶವೆಂದು ಕರೆಯಲಾಗುವ ಮೊರೊಕ್ಕೊ, ಟುನೀಷ್ಯಾ ಹಾಗೂ ಅಲ್ಜೀರಿಯಾ ದೇಶಗಳು. ಈ ಹೆಸರೇ ಆಫ್ರಿಕಾ ಶಬ್ದಕ್ಕೆ ಮೂಲ.

೫೯೧, ೫೯೯). ಕೂಫಿ, ಮುಹದತ್ ಮುಂತಾದ ವಿವಿಧ ದರ್ಜೆಯ ಕಬ್ಬಿಣ ಸಾಗಣೆಯಾಗುತ್ತಿತ್ತು (ಅದೇ. ೫೪೯, ೫೯೨, ಇತ್ಯಾದಿ.). ಕೆಲವೊಮ್ಮೆ ಸರಕುಗಳನ್ನು ಆಯಾ ವ್ಯಕ್ತಿಗಳಿಗೆ ಪ್ರತ್ಯೇಕವಾಗಿ ಕಳಿಸಿಕೊಟ್ಟರೆ ಒಂದೇ ಮೊತ್ತದಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿಗೆ ಸಾಮಗ್ರಿಗಳನ್ನು ರವಾನಿಸಿದ ಉದಾಹರಣೆಗಳೂ ಪತ್ರಗಳಲ್ಲಿ ಸಿಗುತ್ತವೆ. ಒಂದೆಡೆಯಲ್ಲಿ ಜೋಸೆಫ್ ಬಿನ್ ಅಬ್ರಹಾಂ, ಶೇಖ್ ಖಲಾಫ್ (ಖಲಾಫ್ ಬಿನ್ ಇಸ್ಹಾಕ್?) ಹಾಗೂ ಶೇಖ್ ಮದ್‌ಮೂನ್‌ರಿಗೆ ಒಟ್ಟಾಗಿ ಕಬ್ಬಿಣ ಕಳಿಸಿಕೊಟ್ಟು ಈ ಮೂವರೂ ತಮ್ಮತಮ್ಮ ಪಾಲನ್ನು ಹಂಚಿಕೊಂಡದ್ದಾಗಿ ಹೇಳಲಾಗಿದೆ (ಅದೇ, ೫೯೧). ಹೀಗೆ ರಫ್ತಾದ ಸಾಮಗ್ರಿಗಳಿಗೆ ಆದನ್‌ನಲ್ಲಿ ಆಮದು ಶುಲ್ಕ ಪಾವತಿಯಾಗಬೇಕಿತ್ತು. ಯಾರಿಗೆಂದು ಸಾಮಗ್ರಿಗಳು ಮೀಸಲಾಗಿದ್ದವೋ, ಅವರೇ ಅದನ್ನು ನೇರವಾಗಿ ತೆತ್ತಬೇಕಿತ್ತು. ಉದಾಹರಣೆಗೆ, ಮದ್‌ಮೂನ್‌ಗೆ ಬಿನ್ ಯೀಯೂ ಕಳಿಸಿಕೊಟ್ಟ ಏಲಕ್ಕಿಯಲ್ಲಿ ಮೂವತ್ತು ಪೌಂಡ್ ಖಲಾಫ್ ಬಿನ್ ಇಸ್ಹಾಕ್‌ಗೆ ಸೇರಬೇಕಿತ್ತು. ಈ ಮೂವತ್ತು ಪೌಂಡ್‌ಗಳ ಆಮದು ಶುಲ್ಕವನ್ನು ಮದ್‌ಮೂನ್ ಕಟ್ಟಿ ಬಳಿಕ ಖಲಾಫ್‌ನಿಂದ ಪಡೆಯಲಿಲ್ಲ. ಬದಲಿಗೆ ಖಲಾಫ್ ತಾನಾಗಿಯೇ ಪಾವತಿಸಿದ.

ಬಿನ್ ಯೀಯೂ ಆಮದು ಮಾಡಿದ ವಸ್ತುಗಳಲ್ಲಿ ತಾಮ್ರ ಹಾಗೂ ಸೀಸ ಪ್ರಮುಖವಾದ್ದು. ಇವು ಕಂಚಿನ ಉತ್ಪಾದನೆಯಲ್ಲಿ ಬಳಕೆಯಾಗುತ್ತಿದ್ದವು. ದಕ್ಷಿಣ ಭಾರತದಲ್ಲಿ ಈ ಲೋಹಗಳು ಅತ್ಯಲ್ಪ ಪ್ರಮಾಣದಲ್ಲಿ ಮಾತ್ರ ದೊರಕುವುದರಿಂದ ಇವುಗಳ ಆಮದು ಬಹು ಲಾಭಕರ ವ್ಯಾಪಾರವಾಗಿತ್ತು.

ಬಿನ್ ಯೀಯೂ ಮಂಗಳೂರಿನಲ್ಲಿ ತಾಮ್ರದ ಕಾರ್ಖಾನೆಯೊಂದನ್ನು ಸ್ಥಾಪಿಸಿದ್ದ ವಿಷಯ ಪತ್ರಗಳಿಂದ ತಿಳಿದುಬರುತ್ತದೆ. ಅಲ್ಲಿನ ಕೆಲಸಕಾರ್ಯಕ್ಕೆ ಇವನು ಸ್ಥಳೀಯ ಕುಶಲಕರ್ಮಿಗಳನ್ನು ನೇಮಿಸಿಕೊಂಡಿರಬಹುದು. ಆದನ್ ನಿಂದ ಜೋಸೆಫ್ ಬಿನ್ ಅಬ್ರಹಾಂ ಆಗಾಗ ಬಿನ್ ಯೀಯೂಗೆ ತನ್ನಲ್ಲಿದ್ದ ಹಳೆಯ ಹಾಗೂ ಒಡಕಲು ತಾಮ್ರವನ್ನು ಕಳಿಸಿಕೊಟ್ಟು ತನ್ನ ವೈಯ್ಯಕ್ತಿಕ ಬಳಕೆಗೆಂದು ಪಾತ್ರೆಗಳು, ದೀಪ ಮುಂತಾದುವನ್ನು ಮಾಡಿಸುತ್ತಿದ್ದ (ಅದೇ, ೫೫೪, ೫೫೯). ಅನೇಕರಿಗೆ ಬಿನ್ ಯೀಯೂ ಅವರ ಸ್ವಂತ ಬಳಕೆಗೆಂದು ವಿವಿಧ ರೀತಿಯ ತಾಮ್ರದ ಚಂಬು, ಲೋಟ ಮತ್ತು ಇತರ ಪಾತ್ರೆಗಳನ್ನು ಕಳಿಸಿಕೊಟ್ಟ ಉದಾಹರಣೆಗಳು ಪತ್ರಗಳಲ್ಲಿ ಹೇರಳವಾಗಿವೆ (ಉದಾ: ಅದೇ, ೫೫೫, ೫೫೭, ಇತ್ಯಾದಿ.).

ಆಮದುಗೊಳ್ಳುತ್ತಿದ್ದ ಮತ್ತೊಂದು ಗಣನೀಯ ವಸ್ತು ಆರ್ಸೆನಿಕ್. ಇದು ವಿಷ ವೈದ್ಯದಲ್ಲಿ  ಬಳಕೆಯಾಗುತ್ತಿತ್ತು. ಭಾರತದಲ್ಲಷ್ಟೇ ಅಲ್ಲ, ಶ್ರೀಲಂಕಾದಲ್ಲಿಯೂ ಇದು ದೊಡ್ಡ ಬೇಡಿಕೆಯಲ್ಲಿತ್ತು (ಅದೇ, ೫೭೫). ಬಿನ್ ಯೀಯೂನ ಮೂಲಕವೇ ಆರ್ಸೆನಿಕ್ ಶ್ರೀಲಂಕಾಗೆ ಸರಬರಾಜಾಗುತ್ತಿತ್ತು. ಶ್ರೀಲಂಕಾದೊಂದಿಗೆ ಬಿನ್ ಯೀಯೂ ನಿರಂತರ ವ್ಯಾಪಾರ ಸಂಪರ್ಕಗಳನ್ನು ಹೊಂದಿದ್ದ (ಅದೇ, ೫೪೦).

ಆದನ್‌ನಿಂದ ಬಿನ್ ಯೀಯೂ ಬಂಗಾರ ಹಾಗೂ ರೇಷ್ಮೆಯನ್ನು ತರಿಸಿಕೊಳ್ಳುತ್ತಿದ್ದ. ಇವೆರಡೂ ವಿನಿಮಯದ ಮಾಧ್ಯಮಗಳಾಗಿದ್ದವು. ಪತ್ರವೊಂದರಲ್ಲಿ ಜೋಸೆಫ್ ಬಿನ್ ಅಬ್ರಹಾಂ ಬಂಗಾರ ಹಾಗೂ ರೇಷ್ಮೆ ದೊರಕದ ಕಾರಣ ರೊಕ್ಕ (ಸಬೀಬ್) ಕಳಿಸುತ್ತಿರುವುದಾಗಿ

ಹೇಳಿದ್ದಾನೆ. ಇಲ್ಲಿ ಪರಾಮರ್ಶಿತವಾಗಿರುವ ರೊಕ್ಕ ಹಳೆಯ ಚಿನ್ನದಲ್ಲಿ ಟಂಕಿಸಿದ ಇಪ್ಪತ್ತು ಮಲಿಕೀ ದೀನಾರ್‌ಗೆ ಸಮನಾಗಿತ್ತು (ಅದೇ, ೫೬೦). ಮತ್ತೊಂದೆಡೆಯಲ್ಲಿ ಖಿಲಾಫ್ ಬಿನ್ ಇಸ್ಹಾಕ್ ರೇಷ್ಮೆಗೆ ಮಲಬಾರ್‌ನಲ್ಲಿ ಉತ್ತಮ ಮಾರುಕಟ್ಟೆ ಒದಗಿ ಬಂದಿರುವುದರಿಂದ ಬಂಗಾರದ ಬದಲಿಗೆ ಅದನ್ನೇ ಕಳಿಸುತ್ತಿರುವುದಾಗಿ ಹೇಳಿದ್ದಾನೆ (ಅದೇ, ೬೦೨). ಇನ್ನೊಂದೆಡೆಯಲ್ಲಿ ಮಲಿಕೀ ದೀನಾರ್‌ನ ಮೌಲ್ಯದಲ್ಲಿ ಕುಸಿತ ಉಂಟಾದ ಕಾರಣ (ಹಣದ ಬದಲು) ರೇಷ್ಮೆ ರವಾನಿಸುತ್ತಿರುವುದಾಗಿ ಹೇಳಿದ್ದಾನೆ ಖಿಲಾಫ್ (ಅದೇ, ೬೧೧). ರೇಷ್ಮೆಯನ್ನು ವಿನಿಮಯದ ಮಾಧ್ಯಮವಾಗಿ ಸ್ವೀಕರಿಸಿರುವುದು ಗಮನ ಸೆಳೆಯುವ ಸಂಗತಿಯಾಗಿದೆ.

ಬಿನ್ ಯೀಯೂ ತರಿಸಿಕೊಳ್ಳುತ್ತಿದ್ದ ಉಳಿದೆಲ್ಲ ಸಾಮಗ್ರಿಗಳೂ ಅವನ ಸ್ವಂತ ಬಳಕೆಗೆಂದಾಗಿದ್ದವು. ಇವುಗಳಲ್ಲಿ ತಹಲೀ ಕಾಗದ ಸೇರಿದಂತೆ ಹಲವು ಬಗೆಯ ಉತ್ತಮ ಗುಣಮಟ್ಟದ ಕಾಗದ, ಒಣದ್ರಾಕ್ಷಿ, ಸಕ್ಕರೆ, ಮದಿರೆ, ಸಾಬೂನು, ಬಾದಾಮಿ, ಮಘರೀಬೀ ಕಾಡಿಗೆ, ಮರ್ತಕ್ ಎಂಬ ಬೆಳ್ಳಿಕಾಡಿಗೆ, ಮಕ್ತಾ ವಸ್ತ್ರ, ಮಸ್ಸಾ ಮಡಕೆ, ಇವೇ ಮುಂತಾದವು ಸೇರಿವೆ (ಅದೇ, ೫೬೧, ೫೭೧, ೫೯೦, ೬೨೦, ಇತ್ಯಾದಿ.).

ಮಂಗಳೂರಿನಿಂದ ಮಾತ್ರವಲ್ಲ, ಬಿನ್ ಯೀಯೂ ಕೇರಳದ ಕೆಲವು ಬಂದರುಗಳಿಂದಲೂ ವ್ಯವಹಾರ ನಡೆಸಿದ ವಿಚಾರ ಗೆನೀಸಾ ಪತ್ರಗಳಲ್ಲಿ ದಾಖಲಾಗಿದೆ. ಪಂದಲಾಯಿನಿ+ (ಫಂದರಾಯ್ನ) ಹಾಗೂ ಧರ್ಮಡಂ# (ದಹಬತ್ತನ್) ಬಂದರುಗಳಿಂದ ಇವನ ಸರಕುಗಳು ರಫ್ತಾಗುತ್ತಿದ್ದವು (ಅದೇ, ೫೭). ಕೆಲಕಾಲ ಇವನು ಸಕುಟುಂಬ ಜುರ್‌ಬತ್ತನ್ ಎಂಬ ಮತ್ತೊಂದು ಬಂದರುನಗರದಲ್ಲಿ ವಾಸವಾಗಿದ್ದ. ಈ ನಗರ ಯಾವುದೆಂದು ತಿಳಿಯದು. ಪಂದಲಾಯಿನಿಯಿಂದ ಐದು ದಿನಗಳ ಕಾಲ್ನಡಿಗೆ ದೂರದಲ್ಲಿತ್ತೆಂದು ಹೇಳಲಾಗಿದೆ. ಖಿಲಾಫ್ ಬಿನ್ ಇಸ್ಹಾಕ್ ತನ್ನ ಪತ್ರವೊಂದನ್ನು ಬಿನ್ ಯೀಯೂನ ಜುರ್‌ಬತ್ತನ್ ವಿಳಾಸಕ್ಕೆ ಕಳಿಸಿದ್ದಾನೆ (ಅದೇ, ೬೨೪).

ಸರಕುಗಳು ಸಾಗಣೆಯಾಗುತ್ತಿದ್ದ ಹಡಗುಗಳ ಮಾಲೀಕರು (ನಾಖುದಾ) ಬಹುತೇಕ ಅರಬಿಯರಾಗಿದ್ದರು. ಇವರಲ್ಲಿ ರಾಮಿಶ್ತ್ ಅತ್ಯಂತ ಪ್ರಭಾವಶಾಲಿಯಾಗಿದ್ದ. ಈತನ ಪ್ರಸ್ತಾಪ ಗೆನೀಸಾ ಪತ್ರಗಳಲ್ಲಿ ಹಲವು ಸಲ ನಡೆದಿದೆ (ಉದಾ: ಅದೇ, ೩೨೨, ೩೨೪, ೩೨೮, ೩೩೨, ೩೪೨, ೩೫೫, ೪೪೭, ಇತ್ಯಾದಿ.). ಬಿನ್ ಯೀಯೂ ಈತನ ಹಡಗುಗಳ ಮೂಲಕ ಅನೇಕ ಬಾರಿ ವ್ಯವಹಾರ ನಡೆಸಿದ್ದ. ರಾಮಿಶ್ತ್‌ನ ಇಬ್ಬರು ಗಂಡು ಮಕ್ಕಳು ಹಾಗೂ ಇಬ್ಬರು ಅಳಿಯಂದಿರೂ ನಾಖುದಾಗಳಾಗಿದ್ದರು (ಅದೇ, ೩೪೮). ಅಂದಿನ ಮತ್ತೊಬ್ಬ ದೊಡ್ಡ ನಾಖುದಾ ಮಹರೂಸ್ ಬಿನ್ ಯಾಕೂಬ್ (ಅದೇ, ೪೮–೫೧). ಇಬ್ನ್ ಅಲ್ ಮುಖದ್ದಮ್ ಎಂಬ ನಾಖುದಾನ ಪರಾಮರ್ಶೆಯೂ ಒಂದಕ್ಕಿಂತ ಹೆಚ್ಚು ಸಲ ನಡೆದಿದೆ (ಅದೇ, ೩೨೪, ೩೬೪, ೫೮೯, ೫೯೮, ೬೧೩). ಅಬುಲ್ ಹಸನ್ ಬಿನ್ ಅಬುಲ್ ಕತಾಯಿಬ್, ಅಲ್ ಫೌಫಲಿ, ಇಮ್ರಾನ್, ಸಯೀದ್ ಮುಂತಾದವರು ಇತರ ನಾಖುದಾಗಳು (ಅದೇ, ೩೪೯). ಕೇರಳದ ಮೂರು ನಾಖುದಾಗಳ ಪರಾಮರ್ಶೆ

---

+ ಪಂದಲಾಯಿನಿ ಇಂದಿನ ಕೋಟಿಕ್ಕೋಡ್ ಜಿಲ್ಲೆಯ ಕೊಯಿಲಾಂಡಿ ಸಮೀಪದಲ್ಲಿದೆ.

# ಧರ್ಮಡಂ ಅಥವಾ ಧರ್ಮಪಟ್ಟಣಂ ಕಣ್ಣೂರ್ ಜಿಲ್ಲೆಯ ತಲಶ್ಶೇರಿ ಬಳಿಯಿರುವ ದ್ವೀಪ.

ಗೆನೀಸಾ ಪತ್ರಗಳಲ್ಲಿವೆ. ಇವರ ಹೆಸರು ಸ್ಪಷ್ಟವಲ್ಲ. ಹೀಬ್ರೂ ಲಿಪಿಯಲ್ಲಿ ಸ್ವರಗಳಿರದೆ ಕೇವಲ ವ್ಯಂಜನಗಳ ಬಳಕೆಯಾಗುವುದರಿಂದ ಹಾಗೂ ಅರಬಿ ದಾಖಲೆಗಳಲ್ಲಿ ಒಮ್ಮೊಮ್ಮೆ ಸಮನಾದ ಪ್ರಯೋಗಗಳು ಕಾಣದಿರುವುದರಿಂದ ಈ ಗೊಂದಲ ಉಂಟಾಗಿದೆ. ಓರ್ವನ ಹೆಸರು NMBY RWY (ಅದೇ, ೩೨೪). ಈ ಹೆಸರನ್ನು ಡೇವಿಡ್ ಶುಲ್ಮನ್ ಅವರು ನಂಬಿ ರಾಯ ಎಂದು ಗುರುತಿಸಿದ್ದಾರೆ (ಅದೇ, ೧೪೮). ಮತ್ತೊಬ್ಬ ಪಂದಲಾಯಿನಿಯ PTN SWMY. ಇವನ ಹೆಸರಿನ ಅರಬಿ ರೂಪವಾದ ಫತನ್ ಸ್ವಾಮಿ ನಮಗೆ ದೊರೆತಿರುವುದರಿಂದ ಈತ ಪಂದಲಾಯಿನಿಯ ಪಟ್ಟಣಸ್ವಾಮಿಯಾಗಿದ್ದನೆಂಧು ಊಹಿಸಬಹುದಾಗಿದೆ (ಅದೇ, ೫೯). ಮೂರನೆಯವ FYDR (ಅದೇ, ೧೫೯). ಇವನು ಬಹುಶಃ ಕೇರಳದ ಶಾಸನಗಳಲ್ಲಿ ಹೇರಳವಾಗಿ ಕಂಡುಬರುವ ಪರಡೈಯಾರ್ (ಪರಡೈ ಯಾ ಪರಿಷತ್ತಿನ ಸದಸ್ಯ) ಆಗಿರಬಹುದು.

ಹಡಗುಗಳು ದುರಂತಕ್ಕೀಡಾಗುವುದು ಅಂದು ಸರ್ವೇಸಾಮಾನ್ಯವಾಗಿತ್ತು. ಬಿನ್ ಯೀಯೂನ ಸರಕುಗಳನ್ನು ಒಯ್ಯುತ್ತಿದ್ದ ಹಡಗುಗಳು ಮುಳುಗಿಹೋದ ಅನೇಕ ಪ್ರಸಂಗಗಳ ಬಗ್ಗೆ ನಮ್ಮಲ್ಲಿ ಮಾಹಿತಿಯಿದೆ. ಒಮ್ಮೆ ರಾಮಿಶ್ತ್‌ನ ಎರಡು ಹಡಗುಗಳು ಒಂದೇ ಸಮನೆ ಮುಳುಗಿದವು (ಅದೇ, ೫೫೫). ಮತ್ತೊಮ್ಮೆ ಪಟ್ಟಣಸ್ವಾಮಿಯ ಎರಡು ಹಡಗುಗಳಲ್ಲಿ ಒಂದು ಮುಳುಗಿ ಬಿನ್ ಯೀಯೂ ಕಳಿಸಿಕೊಟ್ಟ ಮೆಣಸು ನಾಶವಾಯಿತು. ಈ ಹಡಗು ದಾರಿತಪ್ಪಿ ಬಾಬ್ ಅಲ್ ಮಂಡಬ್* ಬಳಿ ನಾಶಕ್ಕೆ ತುತ್ತಾಗಿ ಬೆರ್ಬೆರಾ* ಬಳಿ ಮುಳುಗಡೆಯಾಯಿತು (ಅದೇ, ೫೯). ಇಬ್ನ್ ಅಲ್ ಮುಖದ್ದಮ್‌ನ ಹೊಸ ಹಡಗೊಂದು ಮುಳುಗಿದ ಬಗ್ಗೆ ಪತ್ರವೊಂದರಲ್ಲಿ ಪ್ರಸ್ತಾಪವಿದೆ (ಅದೇ, ೬೬೬-೬೬೭). ಇಂಥ ದುರಂತಗಳಿಂದ ವ್ಯಾಪಾರ ಚಟುವಟಿಕೆಗಳಲ್ಲಿ ಆಗಾಗ ಸಾಕಷ್ಟು ನಷ್ಟ ಉಂಟಾಗುವುದು ಸಹಜವಾಗಿತ್ತು.

ಹಡಗುಗಳು ಶತ್ರುಗಳ ಹಲ್ಲೆಯನ್ನು ಎದುರಿಸಿದ ಬಗ್ಗೆಯೂ ಗೆನೀಸಾ ಪತ್ರಗಳಲ್ಲಿ ಮಾಹಿತಿಯಿದೆ. ಈ ಶತ್ರುಗಳು ಕಡಲುಗಳ್ಳರಾಗಿದ್ದಿರಬಹುದು. ರಾಮಿಶ್ತ್‌ನ ಹಡಗು ಕನಿಷ್ಟ ಎರಡು ಬಾರಿ ಇಂಥ ಹಲ್ಲೆಗಳಿಂದ ಪಾರಾದ ಕುರಿತು ಪತ್ರಗಳಲ್ಲಿ ಹೇಳಲಾಗಿದೆ (ಅದೇ, ೩೪೨, ೪೪೭).

ಇಂಥ ಬಿಕ್ಕಟ್ಟುಗಳಲ್ಲದೆ ಕೆಲವು ವೈಯ್ಯಕ್ತಿಕ ನಿರ್ಣಯಗಳಿಂದಲೂ ಬಿನ್ ಯೀಯೂ ತೊಂದರೆಗೊಳಗಾಗಿದ್ದಾನೆ. ಒಮ್ಮೆ ಬಿನ್ ಯೀಯೂಗೆ ಏಲಕ್ಕಿ ಕಳಿಸಿಕೊಡಿ ಎಂದು ಖಿಲಾಫ್ ಬಿನ್ ಇಸ್ಹಾಕ್ ಬೇಡಿಕೆ ಸಲ್ಲಿಸಿದ. ಆಗ ಬಿನ್ ಯೀಯೂ ಸ್ಥಳೀಯ ವ್ಯಕ್ತಿಯೊಬ್ಬನಿಗೆ ಖಿಲಾಫ್‌ನ ಲೆಕ್ಕದಿಂದ ಮುಂಗಡ ಹಣ ನೀಡಿದ. ಆದರೆ ಆತ ಹಣ ಪಡೆದನೇ ಹೊರತು ಏಲಕ್ಕಿ ಸರಬರಾಜು ಮಾಡಲಿಲ್ಲ. ಈ ಮೋಸಗಾರಿಕೆಗೆ ಆತನ ವಿರುದ್ಧ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯಿಸಿ ಬಿನ್ ಯೀಯೂಗೆ ಖಿಲಾಫ್ ಕಳಿಸಿದ ಪತ್ರವೊಂದು ಗೆನೀಸಾ ಭಂಡಾರದಲ್ಲಿದೆ (ಅದೇ, ೫೯೨). ಈ ಪತ್ರದಲ್ಲಿ ಬಿನ್ ಯೀಯೂ ಮುಂಗಡ ಹಣ ನೀಡಿದ್ದಕ್ಕೆ ಖಿಲಾಫ್ ತನ್ನ ಅಸಮಾಧಾನ ಸೂಚಿಸಿದ್ದಾನೆ. ಮತ್ತೊಂದು ಪತ್ರದಲ್ಲಿ

* ಬಾಬ್ ಅಲ್ ಮಂಡಬ್ ಹಾಗೂ ಬೆರ್ಬೆರಾ ಪೂರ್ವ ಆಫ್ರಿಕಾದ ಕರಾವಳಿ ನಗರಗಳು.

ಈ ಮುಂಗಡ ಹಣವನ್ನು ತನ್ನ ಲೆಕ್ಕಕ್ಕೆ ಸೇರಿಸಿದ ಬಿನ್ ಯಿಜೂನ ಕ್ರಮದ ಬಗ್ಗೆಯೂ ಖಲಾಫ್ ತೀವ್ರ ಭಿನ್ನಮತ ವ್ಯಕ್ತಪಡಿಸಿರುವುದನ್ನು ಕಾಣಬಹುದು. ಮುಂಗಡ ಹಣ ನೀಡಲು ತಾನು ಎಲ್ಲಿಯೂ ಸೂಚಿಸಿಲ್ಲ, ಅದು ತಮ್ಮ ವೈಯ್ಯಕ್ತಿಕ ನಿರ್ಣಯವಾಗಿತ್ತು ಎಂದು ಆರೋಪಿಸಿದ್ದಾನೆ ಖಲಾಫ್ (ಅದೇ, ೬೧೭). ಆದರೆ ಬಿನ್ ಯಿಜೂನ ಬಗ್ಗೆ ಅಪಾರ ಗೌರವವಿದ್ದ ಖಲಾಫ್ ಎರಡೂ ಪತ್ರಗಳಲ್ಲಿ ಕೊನೆಯ ನಿರ್ಣಯವು ನಿಮಗೇ ಬಿಟ್ಟದ್ದು ಎಂದಿದ್ದಾನೆ.

ಇದು ಅಬ್ರಹಾಂ ಬಿನ್ ಯಿಜೂನ ಸಂಕ್ಷಿಪ್ತ ವೃತ್ತಾಂತ. ಅನೇಕ ರೀತಿಯ ಗೊಂದಲ, ದುರಂತ, ನೋವು, ಕಟ್ಟುಪಾಡುಗಳ ನಡುವೆಯೂ ಇವನು ಸುಮಾರು ಎರಡು ದಶಕಗಳ ಕಾಲ ಮಂಗಳೂರಿನಲ್ಲಿದ್ದು ಸಮೃದ್ಧವಾದ ವ್ಯಾಪಾರ ಚಟುವಟಿಕೆಗಳಲ್ಲಿ ತೊಡಗಿದ್ದು ಶ್ರದ್ಧಾಪೂರ್ವಕ ಹಾಗೂ ಶಿಸ್ತುಬದ್ಧ ಅಧ್ಯಯಕ್ಕೆ ಗುರಿಯಾಗಬೇಕಾದ ವಿಷಯವಾಗಿದೆ. ಕನ್ನಡದ ಓದುಗರ ನಡುವಲ್ಲಿ ಅಂಥ ಅಧ್ಯಯನಕ್ಕೆ ಈ ಪರಿಚಯಾತ್ಮಕ ಲೇಖನ ಪ್ರೇರಣೆಯಾಗಿಲಿ ಎಂಬುದು ನಮ್ಮ ಬಯಕೆ.

## ಆಕರ ಗ್ರಂಥ

S.D Goitein and Mordechai Akiva Friedman (2007), *India Traders of the Middle Ages: Documents from the Cairo Geniza ('India Book')*, Ben-Zvi Institute /Brill, Leiden.



## ನಾಯಕತನ ಮತ್ತು ಸಮುದಾಯಗಳು

–ಡಿ.ಎನ್. ಯೋಗೀಶ್ವರಪ್ಪ

ನಾಯಕ ಎಂಬುದು ಈಗಿನಂತೆ ಜಾತಿ ಸೂಚಕವಲ್ಲ, ಇದರ ಅರ್ಥ ಮುಂದಾಳು, ಮುಖ್ಯಸ್ಥ. ಸಂಸ್ಕೃತ ಭಾಷೆಯ ಈ ಪದ ಭರತನ ನಾಟ್ಯಶಾಸ್ತ್ರವೇ ಮೊದಲಾದ ಕಾವ್ಯಗಳಲ್ಲಿ ಕ್ರಿ.ಶ. ೩ನೇ ಶತಮಾನದಲ್ಲಿಯೇ ಕಾಣಿಸಿಕೊಂಡಿದೆ ಎಂದು ಹೇಳಲಾಗಿದೆ. ಆದರೆ ಇದು ಅಧಿಕಾರ ಸೂಚಕವಾಗಿ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಮೊದಲಿಗೆ ೯ನೇ ಶತಮಾನದ ಕೊನೆಯಲ್ಲಿ ಬಳಕೆಗೆ ಬರುತ್ತದೆ ಎಂದು ಶಾಸನೋಕ್ತ ದಾಖಲೆಯನ್ನು ನೀಡುವುದರ ಮೂಲಕ ನನ್ನ ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು ಕೃತಿಯಲ್ಲಿ ತೋರಿಸಿಕೊಟ್ಟಿದ್ದೇನೆ (**ಯೋಗೀಶ್ವರಪ್ಪ : ೨೦೦೯ : xxiv**). ಗಂಗರ ಆಳ್ವಿಕೆಯ ಕಾಲದ ಈ ಶಾಸನದಲ್ಲಿ ಬರುವ ಪೆಗ್ಗಡೆ ನಾಯಕ ಎಂಬ ವೀರನು ಗೋಗ್ರಹಣದ ಯುದ್ಧದಲ್ಲಿ ಸತ್ತುಹೋದ ಎಂಬ ವಿಷಯವನ್ನಿಟ್ಟುಕೊಂಡು ಈ ಪದ ಆರಂಭದಲ್ಲಿಯೇ ಅಧಿಕಾರಸೂಚಕ ಶಬ್ದವಾಗಿತ್ತು ಎಂಬ ಅರ್ಥವಿವರಣೆ ನೀಡಿದ್ದೇನೆ. ನಂತರ ಈ ಪದವು ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಪೂರ್ವ ಚಾಲುಕ್ಯರ ದಾಖಲೆಗಳನ್ನಾಧರಿಸಿದ ಅಧ್ಯಯನವೊಂದು ಬ್ರಾಹ್ಮಣರನ್ನು ನಿಯೋಗ, ಆಯೋಗ, ಉಸ್ತುವಾರಿ ಅಥವಾ ಕಛೇರಿಗಾಗಿ ನೇಮಕ ಮಾಡಲಾಗುತ್ತಿತ್ತು. ಅಂಥವರನ್ನು ನಿಯೋಗಿನ್ ಅಧಿಕಾರಿಗಳು ಎಂದು ಕರೆಯಲಾಗಿದೆ. ಕ್ರಿ.ಶ. ೮ನೇ ಶತಮಾನದ ಪೂರ್ವ ಚಾಲುಕ್ಯ ರಾಜ ಮಂಗ್ಯೆಯುವರಾಜನ ದಾಖಲೆಯಲ್ಲಿ (ಶಾಸನ) "ನಿಯೋಗಿಕ ವಲ್ಲಭ" ಎಂಬ ಪದವನ್ನು ಕಾಣುತ್ತೇವೆ

(J.EA. III ಪು ೨೫೯ ಎಲ್.ಎಲ್.-೨೫-೨೬, **Kanakadurga** ೧೯೮೩ : ೪೧). ಈ ರೀತಿ ಬ್ರಾಹ್ಮಣರಲ್ಲಿ ಲೌಕಿಕ ಗುಂಪು, ವಿಭಾಗ ಅಸ್ತಿತ್ವಕ್ಕೆ ಬಂತು. ಆದಾಗ್ಯೂ ಇದಕ್ಕಿಂತ ಮೊದಲೇ ಈ ಗುಂಪು, ವಿಭಾಗ ಇದ್ದಿರಬೇಕು. ಆದರೆ ಅದು ಇದೇ ಕಾಲಕ್ಕೆ ಪ್ರತ್ಯೇಕ ಸಮುದಾಯವಾಯಿತೆಂದು ಹೇಳಲು ಸಾಧ್ಯವಿಲ್ಲ. ರಾಜ್ಯದ ಆಡಳಿತ ಸೇವೆಗೆ ಬ್ರಾಹ್ಮಣರನ್ನು ಹೊರತುಪಡಿಸಿದ ಇತರ ಸಮುದಾಯಗಳು ಸೇರಿಕೊಂಡಾಗ ಅವರನ್ನು ನಾಯಕರೆಂದು ಕರೆಯಲಾಯಿತು. ಪ್ರೊ. ಆರ್.ನರಸಿಂಹರಾವ್‌ರವರು ನಾಯಕರು ಬ್ರಾಹ್ಮಣ ನಿಯೋಗಿಗಳ ವಿರುದ್ಧವಾಗಿ ಸೃಷ್ಟಿಯಾದ ಶೂದ್ರವರ್ಗದ ಪ್ರತ್ಯೇಕ ವಿಭಿನ್ನ ಗುಂಪು ಎಂದು ಅಭಿಪ್ರಾಯಪಡುವರು. ಆದರೆ ಈ ಪ್ರತ್ಯಯವು ಆ ಕಾಲದಲ್ಲಿ ಶೂದ್ರ ವರ್ಗದವರ ಏಕಸ್ವಾಮ್ಯವಾಗಿರಲಿಲ್ಲ (**ನರಸಿಂಹರಾವ್ : ೧೯೬೭ : ೧೦೮, Kanakadurga** ೧೯೮೩ : ೪೧). ವ್ಯಕ್ತಿಯ ಹೆಸರಿನ ಜೊತೆ ನಾಯಕ ಪ್ರತ್ಯಯ ಜೋಡಣೆಯಾಗಿರುವುದರ ಶಾಸನಗಳ ಸುದೀರ್ಘವಾದ ಪಟ್ಟಿಯನ್ನೇ ನೀಡಿರುವ ಕನಕದುರ್ಗರವರು ಅದರ ಆಧಾರದ ಮೇಲೆ ಮಹಾಮಂಡಲೇಶ್ವರರಿಂದ ಸೇವಕರವರೆಗೆ ವಿವಿಧ ಹುದ್ದೆಗಳಲ್ಲಿ ಇರುವವರೆಲ್ಲಾ ಇದನ್ನು ಧರಿಸುವರು ಎನ್ನುವರು (**Kanakadurga** ೧೯೮೩ : ೪೧, ೪೨). ಆದ್ದರಿಂದ ನಾಯಕ ಎನ್ನುವುದು ನಿರ್ದಿಷ್ಟವಾದ ಹುದ್ದೆಯಲ್ಲ, ಇದು ಒಂದು ಅಧಿಕಾರ ಸೂಚಕ ಪದ ಎಂದು ಹೇಳಬಹುದು. ವರ್ಣಾಶ್ರಮ ಧರ್ಮದ ನಾಲ್ಕನೇ ವರ್ಣದಲ್ಲಿ ಬರುವ ಶೂದ್ರ ವರ್ಗದವರು ಅತಿಹೆಚ್ಚು ನಾಯಕ ಹುದ್ದೆಯಲ್ಲಿದ್ದವರೇ ಆಗಿದ್ದಾರೆ. ಆದರೆ ಅದೇ ಸಂದರ್ಭದಲ್ಲಿ ಬ್ರಾಹ್ಮಣರೂ ನಾಯಕರಾಗಿದ್ದುದನ್ನು ಆಸಕ್ತಿಯಿಂದ ಗಮನಿಸಬೇಕಾಗುತ್ತದೆ. ಕ್ರಿ.ಶ. ೧೨೫೯ರ ಶಾಸನವೊಂದು ಈರಪ್ಪನಾಯಕ ಎಂಬುವನು ಗಂಗಮಾಧವ ದೇವಾಲಯದ ಸ್ಥಾನಪತಿಯಾಗಿದ್ದನು. ರಾಜನಾಯಕ ಎಂಬುವನು ರಾಚೇರಿಯಾನ ಮಂತ್ರಿಯಾಗಿದ್ದನು ಮತ್ತು ಇವರಿಬ್ಬರೂ ಬ್ರಾಹ್ಮಣರಾಗಿದ್ದುದನ್ನು ಕನಕದುರ್ಗರವರು ಶಾಸನೋಕ್ತ ದಾಖಲೆಯ ಮೂಲಕ ಸ್ಪಷ್ಟಪಡಿಸಿದ್ದಾರೆ (**Kanakadurga** ೧೯೮೩ : ೪೩). ಆದ್ದರಿಂದ ನಾಯಕರಾಗಲು ಜಾತಿಯೇ ಪ್ರಮುಖ ಅರ್ಹತೆಯಾಗಿರಲಿಲ್ಲ. ಯಾವ ಜಾತಿಯವರಾದರೂ ಈ ಅಧಿಕಾರಯುತ ಹುದ್ದೆಗೆ ಬರಬಹುದಿತ್ತು ಎಂದು ಹೇಳಬಹುದು. ಆದರೆ ಕನಕದುರ್ಗರವರು ಯಾವ ಅರ್ಹತೆಯ ಆಧಾರದ ಮೇಲೆ ಅವರನ್ನು ನೇಮಕ ಮಾಡಲಾಗುತ್ತಿತ್ತು ಎಂಬುದರ ಬಗ್ಗೆ ಮೌನ ವಹಿಸಿದ್ದಾರೆ. ಆದರೂ ಅವರು ಆರಂಭಿಕ ಕಾಕತೀಯರ ಕಾಲದಿಂದ ಕ್ರಿ.ಶ. ೧೨೫೦ರವರೆಗಿನ ದಾಖಲೆಗಳನ್ನು ಪರಿಶೀಲಿಸಿ ಹೆಚ್ಚುಕಡಿಮೆ ನಾಯಕರು ಶೂದ್ರವರ್ಗದ ರೈತಾಪಿ ಜನರೇ ಆಗಿದ್ದು ಅದರಲ್ಲಿ ವೇಲಮ, ಬಲಿಜ ಮತ್ತು ತೆಲಿಗರೂ ಸೇರಿದ್ದರೆಂದು ತೋರಿಸಿಕೊಟ್ಟಿದ್ದಾರೆ (**Kanakadurga** ೧೯೮೩ : ೪೪). ಮಧ್ಯಕಾಲೀನ ಒರಿಸ್ಸಾದ ನಾಯಕ ವ್ಯವಸ್ಥೆಯ ಮೇಲೆ ಸಂಶೋಧನೆ ನಡೆಸಿರುವ ಪಾಂಡೆಯವರು ಕೆಲವು ಶಾಸನಗಳ ಆಧಾರದ ಮೇಲೆ ನಾಯಕರು, ಬ್ರಾಹ್ಮಣ, ವೈಶ್ಯ ಮತ್ತು ಕಾಯಸ್ಥ ಸಮುದಾಯಕ್ಕೆ ಸೇರಿದ್ದರು ಎಂದು ಹೇಳುತ್ತಾರೆ (**ಶಿಶಿರ ಕುಮಾರ್‌ಪಾಂಡೆ** ೧೯೮೮ : ೯೭). ಆದ್ದರಿಂದ ನಾಯಕತನವು ಒಂದೇ ಸಮುದಾಯಕ್ಕೆ ಸೀಮಿತವಾಗಿರಲಿಲ್ಲ ಎನ್ನಬಹುದು.

ವಿಜಯನಗರ ಸಾಮ್ರಾಜ್ಯ ಪರಿಷ್ಕೃತ ನಾಯಕ ವ್ಯವಸ್ಥೆಯನ್ನು ತನ್ನ ಆಡಳಿತದಲ್ಲಿ ಅಳವಡಿಸಿಕೊಂಡಾಗ ಅವರೂ ಕೂಡಾ ಎಲ್ಲ ಸಮುದಾಯಗಳಿಗೆ ಈ ವ್ಯವಸ್ಥೆಯ

ಅಡಿಯಲ್ಲಿ ಅವಕಾಶ ಮಾಡಿಕೊಟ್ಟರು. ನಾಯಕರ ವ್ಯವಸ್ಥೆಯನ್ನು ಕುರಿತು ಅಧ್ಯಯನ ಮಾಡಿರುವ ಆರಂಭಿಕ ಇತಿಹಾಸಕಾರರಾದ ಎನ್.ವೆಂಕಟರಮಣಯ್ಯನವರು "ರಾಜ್ಯದ ಗವರ್ನರುಗಳನ್ನು ಬ್ರಾಹ್ಮಣ ನಾಯಕರಲ್ಲಿಯೇ ಆಯ್ಕೆಮಾಡಿಕೊಳ್ಳುತ್ತಿದ್ದರು". ಅಂದರೆ ಕೆಲವು ನಾಯಕರು ಅವರ ಅಭಿಪ್ರಾಯದಂತೆ ಬ್ರಾಹ್ಮಣರಾಗಿದ್ದರು. ಇದನ್ನು ಮತ್ತಷ್ಟು ಸಮರ್ಥನೆ ಮಾಡಿ ಹೇಳುವುದಾದರೆ, ಕೃಷ್ಣದೇವರಾಯನಿಂದಲೇ ರಚಿತವಾದ ತೆಲುಗು ಭಾಷೆಯ ಆಮುಕ್ತ ಮಾಲ್ಯದ ಕೃತಿಯು ಕೋಟೆಯ ಕಾವಲು, ರಕ್ಷಣೆ ಇತ್ಯಾದಿ ಹೊಣೆಗಳನ್ನು ತನ್ನ ಆಪ್ತಬಂಧುಗಳಿಗೇ ವಹಿಸಬೇಕು ಎಂದು ಹೇಳುತ್ತದೆ (ನಿರುಪಮಾ ೨೦೧೦ : ೬೩). ಕೃಷ್ಣದೇವರಾಯನು ಬ್ರಾಹ್ಮಣರ ವಶಕ್ಕೆ ಪ್ರಾಂತೀಯ ಗವರ್ನರ್ ಮತ್ತು ಕೋಟೆಯ ದಂಡನಾಯಕತ್ವವನ್ನು ಸಮರ್ಪಿಸಿದ್ದನು. ಏಕೆಂದರೆ ಬ್ರಾಹ್ಮಣರು ತಮ್ಮ ಮೊದಲ ನಿಷ್ಠೆಯನ್ನು ಚಕ್ರವರ್ತಿಗೆ ನೀಡುತ್ತಿದ್ದರಲ್ಲದೆ ಕ್ಷತ್ರಿಯ, ಶೂದ್ರ, ಬೇಡ ಅಧಿಕಾರಿಗಳನ್ನು ಧಿಕ್ಕರಿಸುವ ಹೋರಾಟದಲ್ಲಿ ಮೇಲುಗೈಯನ್ನು ಸಾಧಿಸುತ್ತಿದ್ದರು. ಕೃಷ್ಣದೇವರಾಯನ ಕಾಲದ ನಾಯಕತನಗಳನ್ನು ಕುರಿತಾದ ನನ್ನ ಸುದೀರ್ಘ ಲೇಖನದಲ್ಲಿ ನಾಯಕತನ ಪಡೆದ ಇಪ್ಪತ್ತೆರಡು ಬ್ರಾಹ್ಮಣರನ್ನು ಗುರ್ತಿಸಿ ಅವರ ಗೋತ್ರಗಳನ್ನು ನೀಡಿರುವುದೇ ಅಲ್ಲದೆ ಅವರು ಯಾವ ಸೀಮೆಯ ನಾಯಕತನ ಪಡೆದುಕೊಂಡಿದ್ದರು ಎಂಬ ಪಟ್ಟಿಯನ್ನೇ ನೀಡಿದ್ದೇನೆ (**ಯೋಗೀಶ್ವರಪ್ಪ ೨೦೧೧ : ಪು ೯೬, ೯೭**). ಆದ್ದರಿಂದ ನಾಯಕತನ ಪಡೆದುಕೊಂಡವರಲ್ಲಿ ಬ್ರಾಹ್ಮಣರೂ ಅಧಿಕ ಸಂಖ್ಯೆಯಲ್ಲಿದ್ದರೆಂದು ಹೇಳಬಹುದು. ಇದನ್ನೇ ಟಾಲ್ಬಾಟ್ ಅವರೂ ಕೂಡಾ ಆಂಧ್ರ ಪ್ರಾಂತದಲ್ಲಿ ನಾಯಕ ಉಂಬಳಿ ಪಡೆದವರು ಕೇವಲ ಬ್ರಾಹ್ಮಣರಾಗಿರಲಿಲ್ಲ. ಕೃಷ್ಣದೇವರಾಯನ ಕಾಲದಲ್ಲಿ ಅತ್ಯಂತ ಪ್ರಭಾವಿ ನಾಯಕರಾಗಿದ್ದವರು ಬ್ರಾಹ್ಮಣರು ಎಂದಿದ್ದಾರೆ (**ಟಾಲ್ಬಾಟ್ ೨೦೦೧ : ೨೫೭**). ಅಂದರೆ ಬ್ರಾಹ್ಮಣ ನಾಯಕರು ಅತ್ಯಂತ ಪ್ರಭಾವಿಗಳಾಗಿದ್ದರು ಮತ್ತು ಎಲ್ಲ ಸಮುದಾಯಗಳು ನಾಯಕತನ ಪಡೆದುಕೊಳ್ಳುತ್ತಿದ್ದವು ಎಂದು ಅರ್ಥೈಸಿಕೊಂಡಿರುವುದು ಸ್ಪಷ್ಟವಾಗುತ್ತದೆ.

ಆದರೆ ಬರ್ಟನ್‌ಸ್ಟೇನ್‌ರು "ಬ್ರಾಹ್ಮಣೇತರರಾದ ನಾಯಕರನ್ನು ನಿಯಂತ್ರಿಸಲು ಬ್ರಾಹ್ಮಣರನ್ನು ಗವರ್ನರುಗಳನ್ನಾಗಿ ನೇಮಕ ಮಾಡಲಾಗುತ್ತಿತ್ತು" ಎಂದಿದ್ದಾರೆ. ಅಂದರೆ ನಾಯಕರು ಬ್ರಾಹ್ಮಣರಾಗಿರಲಿಲ್ಲ ಬ್ರಾಹ್ಮಣೇತರರೇ ನಾಯಕರಾಗಿದ್ದರು. ಅವರನ್ನು ನಿಯಂತ್ರಣ ಮಾಡಲು ಬ್ರಾಹ್ಮಣರನ್ನು ಗವರ್ನರುಗಳನ್ನಾಗಿ ನೇಮಕ ಮಾಡುತ್ತಿದ್ದರು ಎಂದು ಅರ್ಥೈಸಿಕೊಂಡಿರುವುದು ಸಾಧ್ಯ. ವಿಜಯನಗರ ಸಾಮ್ರಾಜ್ಯದಲ್ಲಿ ನಾಯಕ ವ್ಯವಸ್ಥೆಯು ತುಳುವ ಕಾಲದಲ್ಲಿ ಅದರಲ್ಲೂ ಕೃಷ್ಣದೇವರಾಯನ ಕಾಲದಲ್ಲಿ ಉಚ್ಛ್ರಾಯ ಮಟ್ಟವನ್ನು ತಲುಪಿತ್ತು. ಅವರ ಕಾಲದಲ್ಲಿ ನಾಯಕ ವ್ಯವಸ್ಥೆಯು ಕೇಂದ್ರ ಸ್ಥಾನವನ್ನು ಆಕ್ರಮಿಸಿದ ನಂತರ ಈಗಾಗಲೇ ಇದ್ದ ಗವರ್ನರುಗಳ ಹುದ್ದೆ ನಾಯಕ ಹುದ್ದೆಗಿಂತ ಭಿನ್ನವಾಗಿತ್ತೇ ಎಂಬ ಪ್ರಶ್ನೆ ಬರ್ಟನ್‌ಸ್ಟೇನ್‌ರ ಹೇಳಿಕೆಯಿಂದ ಉದ್ಭವವಾಗುತ್ತದೆ. ಈಗಾಗಲೇ ನಾವು ವಿಜಯನಗರ ಇತಿಹಾಸದ ಬರವಣಿಗೆಯಲ್ಲಿ ಮಹಾಮಂಡಲೇಶ್ವರ ಮತ್ತು ದುರ್ಗದಣ್ಣಾಯಕ ಎಂಬ ದೇಸೀಯ ಪದಗಳಿಗೆ ಪ್ರತಿಯಾಗಿ ಗವರ್ನರ್ ಎಂಬ ಪದ ಬಳಸಿರುವುದನ್ನು ಕಂಡಿದ್ದೇವೆ. ವಿಜಯನಗರ ರಾಜಕೀಯ ವ್ಯವಸ್ಥೆಯಲ್ಲಿ ಮಹಾಮಂಡಳೇಶ್ವರ ಕೇವಲ ಸಾಂಕೇತಿಕ ಬಿರುದೇ ಅಥವಾ ನಿರ್ದಿಷ್ಟ ಹುದ್ದೆಗೆ ಸಂಬಂಧಿಸಿದ್ದೇ ಅಥವಾ

ಗೌರವಾನ್ವಿತ ಹೆಸರೇ ಎಂಬ ಬಗೆಗೆ ಇಲ್ಲಿಯವರೆಗೂ ಸರಿಯಾದ ಶೋಧಗಳಾಗಿಲ್ಲ. ಆದರೂ ಕೆಲ ವಿದ್ವಾಂಸರು ಬ್ರಾಹ್ಮಣರನ್ನು ಗವರ್ನರ್ ಹುದ್ದೆಗೆ ನೇಮಕ ಮಾಡಲಾಗುತ್ತಿತ್ತು ಎಂದು ಹೇಳುವರು. ಆದರೆ ಇಲ್ಲಿಯವರೆಗೂ ಮಹಾಮಂಡಳೇಶ್ವರ ಎಂಬ ಬಿರುದನ್ನು ಪಡೆದ ಬ್ರಾಹ್ಮಣರ ಯಾವ ಉದಾಹರಣೆಯೂ ವರದಿಯಾಗಿಲ್ಲ. ಆದ್ದರಿಂದ ಇದೊಂದು ರಾಜಕುಟುಂಬ ವರ್ಗಕ್ಕೆ ಸೇರಿದ ಗೌರವಾನ್ವಿತ ಬಿರುದು ಎಂದು ಓತಾ ಹೇಳುವರು (Ota ೨೦೦೮) ಆದರೆ ಕೃಷ್ಣದೇವರಾಯನ ಕಾಲದಲ್ಲಿ ಮಹಾಮಂಡಳೇಶ್ವರ ರಾಚಿರಾಜುವಿನ ಕುಟುಂಬವು ಬ್ರಾಹ್ಮಣ ಜನಾಂಗಕ್ಕೆ ಸೇರಿದ್ದು ಅವರು ಪ್ರಾಂತೀಯ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆಂದು ಆಧಾರಪೂರ್ವಕವಾಗಿ ಹೇಳಿದ್ದೇನೆ (**ಯೋಗೀಶ್ವರಪ್ಪ ೨೦೧೧ : ೯೯, ೧೦೦**) ಮತ್ತು ಮಹಾಮಂಡಳೇಶ್ವರ ಗೌರವಾನ್ವಿತ ಬಿರುದಲ್ಲ, ಇದೊಂದು ನಾಯಕತನ ಪಡೆದವರಿಗಿಂತ ಮೇಲ್ಮಟ್ಟದ ಕಛೇರಿಯಾಗಿತ್ತು. ಈ ಮಹಾಮಂಡಳೇಶ್ವರರೇ ತಮ್ಮ ಅಧೀನವರ್ತಿಗಳಿಗೆ ನಾಯಕತನ ನೀಡಿರುವ ಅನೇಕ ಉದಾಹರಣೆಗಳನ್ನು ನೀಡಿದ್ದೇನೆ (**ಯೋಗೀಶ್ವರಪ್ಪ ೨೦೦೯ : ೩೭೬**). ಆದ್ದರಿಂದ ಮಹಾಮಂಡಳೇಶ್ವರ (ಗವರ್ನರ್) ಮತ್ತು ನಾಯಕರು ಏಕಕಾಲದಲ್ಲಿದ್ದು ವಿಜಯನಗರದ ಪ್ರಾಂತ್ಯಾಡಳಿತದಲ್ಲಿ ತಮಗೆ ವಹಿಸಿದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು ಎಂದು ಹೇಳಬಹುದು.

ಆಂಧ್ರ ಪ್ರಾಂತ್ಯದ ನಾಯಕರನ್ನು ಕುರಿತು ಸಂಶೋಧನೆ ಮಾಡಿರುವ ಟಾಲ್ಬಾಟ್ ಅವರು ಸದಾಶಿವರಾಯನ ಕಾಲದಲ್ಲಿ ೬೩ ಅಮರನಾಯಕತನಗಳ ಪೈಕಿ ಮೂರನೇ ಒಂದು ಭಾಗ ಅರವೀಡು ಮತ್ತು ನಂದ್ಯಾಲ ವಂಶದ ಅಮರನಾಯಕರಿದ್ದರು ಎಂದು ಹೇಳುವರು. (**ಟಾಲ್ಬಾಟ್ ೨೦೦೧ : ೨೬೦**) ಆದರೆ ಅವರು ವಂಶವನ್ನು ಹೇಳುವರೇ ಹೊರತು ಅವರ ಜಾತಿ, ಸಮುದಾಯವನ್ನು ಕುರಿತು ಏನೂ ಹೇಳಿಲ್ಲ. ಲಕ್ಷ್ಮಣ್ ತೆಲಗಾವಿಯವರು ತಮ್ಮ ಎಪ್ಪತ್ತೇಳು ಪಾಳೆಯಗಾರರು ಎಂಬ ಲೇಖನದಲ್ಲಿ ನಾಯಕರ ಒಕ್ಕೂಟದ ಕಮ್ಮ, ರೆಡ್ಡಿ, ಬೋಯ ಮತ್ತು ಬಲಿಜ ವರ್ಗಗಳ ನಾಯಕರು ತಮ್ಮ ಸಂಗಡಿಗರು ಮತ್ತು ಬಂಧುಗಳೇ ಆಗಿದ್ದ ವಿಜಯನಗರದ ಅರಸರ ಅಧೀನದ ನಾಯಂಕರ ವ್ಯವಸ್ಥೆಯನ್ನು ಒಪ್ಪಿಕೊಂಡರು ಎಂದಿದ್ದಾರೆ (**ಲಕ್ಷ್ಮಣ ತೆಲಗಾವಿ, ೧೯೮೮ : ೨೨೮, N.G.Ranga – ೧೯೭೧ : ೧೦೮**).

ಕೃಷ್ಣದೇವರಾಯನ ಕಾಲದಲ್ಲಿ ನಾಯಕತನಕ್ಕೆ ನೀಡಿದ ಭೂಪ್ರದೇಶಗಳಲ್ಲಿ ಅರ್ಧಭಾಗವನ್ನು ಬ್ರಾಹ್ಮಣರು ಪಡೆದುಕೊಂಡಿದ್ದರೆ, ಇತರೆ ಜನಾಂಗದವರೂ ಉಳಿದಾರ್ಧ ಭಾಗವನ್ನು ಪಡೆದು ಕೊಂಡಿದ್ದರು. ಉದಾಹರಣೆಗೆ: ಬೇಡರ ನರಸನಾಯಕ ಕುಂದುರ್ತಿಸೀಮೆ (**Parabrhama Sastry ೨೦೦೯ : No. ೧೪೧**) ಬೇಡರ ತಿಪ್ಪನಾಯಕ ಬಸವಕೊಂಡಸೀಮೆ (**Parabrhama Sastry ೨೦೦೯ : No. ೧೪೨**) ಪ್ರಧಾನ ಬಸವಪ್ಪಯ್ಯನು ಯಿರ್ರಗೊಲ್ಲ ಜಾತಿಗೆ ಸೇರಿದ್ದನು (**ಪರಶಿವಮೂರ್ತಿ ಡಿ.ವಿ. ೨೦೧೦ : ೧, ನಂ ೧೫೯**). ಮಧ್ಯಕಾಲೀನ ಕರ್ನಾಟಕದ ಪಾಳೇಗಾರರನ್ನು ಕುರಿತಾದ ನನ್ನ ಅಧ್ಯಯನ ಕೃತಿಯಲ್ಲಿ ಬಹುಪಾಲು ನಾಯಕರು ತೆಲುಗು ಅಥವಾ ತಮಿಳು ಭಾಷಿಕ ಪ್ರದೇಶದಿಂದ ಬಂದವರೆಂದು ತೋರಿಸಿಕೊಟ್ಟಿದ್ದೇನೆ. ಆದರೆ ಅವರ ಸಮುದಾಯ ಅಥವಾ ವರ್ಗವನ್ನು ಸುಲಭವಾಗಿ ಗುರ್ತಿಸಲು ಸಾಧ್ಯವಾಗದು. ರಾಯವಾಚಕಮು ಕೃತಿಯಲ್ಲಿ ನಾಯಕರಲ್ಲಿ ರೆಡ್ಡಿ ಮತ್ತು

ಕಮ್ಮ ಎಂಬ ಸಮುದಾಯಗಳಿವೆ ಎಂದು ಹೇಳಲಾಗಿದೆ. ಕರ್ನಾಟಕದ ಅಮರನಾಯಕರ ಮಟ್ಟಿಗೆ ಹೇಳುವುದಾದರೆ, ಅವರಲ್ಲಿ ನಾಲ್ಕು ಅಥವಾ ಅದಕ್ಕಿಂತ ಹೆಚ್ಚು ಸಮುದಾಯಗಳನ್ನು ಗುರ್ತಿಸಬಹುದು. ಅವುಗಳೆಂದರೆ ಬೇಡ, ಗೊಲ್ಲ, ಲಿಂಗಾಯಿತ, ಗೌಡ, ಕುರುಬ ತಮಿಳುನಾಡಿನಲ್ಲಿ ಕಳ್ಳರ್ ಮತ್ತು ಮಾರ್‍ವಾರ್ ಮಹಾರಾಷ್ಟ್ರದಲ್ಲಿ ರಾಮೋಷಿಗಳು ಎಂದು ಗುರ್ತಿಸಬಹುದು. ವಿಜಯನಗರ ಸಾಮ್ರಾಜ್ಯದ ಅಮರನಾಯಕರಲ್ಲಿ ಕೆಲವರಾದರೂ ರಾಜಕುಟುಂಬದ ಸಂಬಂಧಿಗಳಾಗಿದ್ದಿರಬಹುದು. **(ಯೋಗೀಶ್ವರಪ್ಪ ೨೦೦೯ : ಪು. X)** ಆದುದರಿಂದ ನಾಯಕತನ ಒಂದೇ ಜಾತಿಗೆ ಸೀಮಿತವಾಗಿರಲಿಲ್ಲ ಎಂದು ಹೇಳಬಹುದು. ಇದನ್ನು ಮತ್ತಷ್ಟು ವಿಸ್ತರಿಸಿ ಹೇಳುವುದಾದರೆ, ನಾಯಕರು ಅನೇಕ ಜಾತಿಗಳಿಗೆ ಸೇರುವರು, ಕ್ಷತ್ರಿಯ, ಬಲಿಜ, ಕಮ್ಮ, ವೇಲಮ, ಬ್ರಾಹ್ಮಣ, ಬೋಯಾ ಮತ್ತು ಮುಸ್ಲಿಂ ನಾಯಕರೂ ಇದ್ದರು ಎಂದು ಸೋಮರೆಡ್ಡಿಯವರು ಅಭಿಪ್ರಾಯಪಟ್ಟಿದ್ದಾರೆ. **(ಸೋಮರೆಡ್ಡಿ ೧೯೯೪ : ೩೧೦)** ಸುಬ್ಬರಾಯಲೂ ಕೂಡಾ ನಾಯಕ ವ್ಯವಸ್ಥೆ ಜಾತಿ ಸಂಬಂಧಗಳನ್ನು ಮೀರಿದ್ದು ಮತ್ತು ಅನೇಕ ಗ್ರಾಮುಕ ಹಾಗೂ ಬುಡಕಟ್ಟು ಸಮುದಾಯಗಳು ಕೂಡಾ ನಾಯಕರನ್ನು ತಯಾರಿಸುತ್ತಿದ್ದವು **(ಸುಬ್ಬರಾಯಲು ೨೦೦೫ : ೭೩)**. ಆದ್ದರಿಂದ ಈ ಎಲ್ಲಾ ಅಧ್ಯಯನಗಳೂ ನಾಯಕರ ಜಾತಿಯನ್ನು ನಿರ್ದೇಶಿಸುವಲ್ಲಿ ವೈವಿಧ್ಯತೆಯನ್ನು ಹೇಳುತ್ತವೆ. ನಾಯಕರ ವ್ಯವಸ್ಥೆಯಲ್ಲಿ ನಾಯಕತನ ಪಡೆದಿರುವಲ್ಲಿ ಬ್ರಾಹ್ಮಣರು ಮೇಲುಗೈ ಸಾಧಿಸಿದ್ದರೂ ಸಮಾಜದ ಇತರೆ ವರ್ಗಗಳನ್ನು ಕೂಡಾ ಕಡೆಗಣಿಸಿರಲಿಲ್ಲ. ಶೂದ್ರವರ್ಗಕ್ಕೆ ಸೇರಿದ ಅನೇಕ ಜಾತಿಗಳು ನಾಯಂಕರ ವ್ಯವಸ್ಥೆಯಲ್ಲಿ ಪಾಲ್ಗೊಂಡಿದ್ದವು ಎಂದು ಹೇಳಬಹುದು.

## ಪರಾಮರ್ಶನ ಗ್ರಂಥಗಳು

**ಕನ್ನಡ:**

೧. ಯೋಗೀಶ್ವರಪ್ಪ ಡಿ.ಎನ್. (೨೦೦೯) ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು, ಧಾತ್ರಿ ಪುಸ್ತಕ ಪ್ರಕಾಶನ, ಬೆಂಗಳೂರು.

೨. ಯೋಗೀಶ್ವರಪ್ಪ ಡಿ.ಎನ್. (೨೦೧೧) ಚರಿತ್ರೆಯ ಪುಟಗಳು, ಸಿ.ವಿ.ಜಿ.ಇಂಡಿಯ, ಬೆಂಗಳೂರು.

೩. ಯೋಗೀಶ್ವರಪ್ಪ ಡಿ.ಎನ್. (೨೦೦೯ ಬಿ) "ವಿಜಯನಗರ ಕಾಲದ ತುಮಕೂರು ಪ್ರದೇಶದ ನಾಯಕರು", ಆರ್.ಗೋಪಾಲ್ (ಸಂ.) ತುಮಕೂರು ಜಿಲ್ಲಾ ಇತಿಹಾಸ ಮತ್ತು ಪುರಾತತ್ತ್ವ, ಪು: ೩೬೬-೩೯೪, ಪುರಾತತ್ತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆ, ಮೈಸೂರು.

೪. ನಿರುಪಮಾ (೨೦೧೦) ಶ್ರೀ ಕೃಷ್ಣದೇವರಾಯನ ಆಮುಕ್ತ ಮಾಲ್ಯದ, ಪ್ರಸಾರಾಂಗ, ಹಂಪಿ, ಕ.ವಿ.ವಿ.

೫. ಲಕ್ಷ್ಮಣತೆಲಗಾವಿ (೧೯೮೮) "ಎಪ್ಪತ್ತೇಳು ಪಾಳೆಯಗಾರರು", ಇತಿಹಾಸ ದರ್ಶನ ಸಂ-೦೩ (ಸಂ. ಸೂರ್ಯನಾಥ ಕಾಮತ್ ಮತ್ತು ಲಕ್ಷ್ಮಣ್ ತೆಲಗಾವಿ), ಬೆಂಗಳೂರು ಕರ್ನಾಟಕ ಇತಿಹಾಸ ಅಕಾದೆಮಿ, ಪು. ೨೨೫-೨೫೨.

೬. ಪರಮಶಿವಮೂರ್ತಿ ಡಿ.ವಿ. (ಸಂ.) (೨೦೧೦) ಕೃಷ್ಣದೇವರಾಯನ ಶಾಸನಗಳು ಸಂ-೧, ಹಂಪಿ ಕನ್ನಡ ವಿ.ವಿ., ಪ್ರಸಾರಾಂಗ.

**ಇಂಗ್ಲಿಷ್:**

1. Shishir Kumar Pandlay (1988) "Nayaka System in Medieval Andhra"- K.K Das Gupta, PK Bhattacharya (Ed) *Shraddanjali, D C Circar Commemoration Volume*, Delhi, Sandeep Prakashana.

2. Kanaka Durga (1983) *Role of Nayakas in Medieval Andhra* (1000-1259) Andhra Pradesh History Congress Vol-7, P. 40-45.
3. Narasimha Rao R.(1967) *Corporate life in Medieval Andhra*, Secundarabad.
4. Ranga N.G (1971) *Kakateeya Nayaka's and their contribution to Dakshinapathas Independence*, Nidobrolu, Andhra.
5. Somareddy (1994) "Nayankara system in Medieval Andhra, some observation" in proceedings of South Indian History Congress, 14th session Tirupathi 308-314.
6. Tobat Cynthia (2001) : "The Nayakas of Vijayanagar Andhra : A preliminary prosography" in Kenneth R Hall (ed) *structure and society in early South India*, Essays in honour of Noboru Karashima Oxford : Oxford University Press 251-275.
7. Parabrahma Sastry (2009) *Inscriptions of Vijayanagar Rulers, Volume IV,* Bangalore, ICHR Southerb Regional Centre.
8. Subbrayalu Y. (2005) "The Vijayanagara State" in J.S.Grewel (ed) *The State and Society in Medieval India (History of Indian Science Philosophy and Culture in Indian civilization Vol VII )* Pp. 67-76. Oxford : O.U.P.
9. Ota Nobuhiro (2008) "A study of Two Nayaka families in the Vijayanagar kingdom in the sixteenth century " in *memoirs of the ToyoBunko,66: 103- 129*


■

---

## 'ಪುಸ್ತಕ ವಿಮರ್ಶೆ' ವಿಭಾಗಕ್ಕೆ ಕೃತಿಗಳ ಆಹ್ವಾನ

'ಇತಿಹಾಸ ದರ್ಪಣ'ದ 'ಪುಸ್ತಕ ವಿಮರ್ಶೆ' ವಿಭಾಗಕ್ಕೆ ಪುಸ್ತಕಗಳನ್ನು ಕಳುಹಿಸಿಕೊಡುವ ಲೇಖಕರು ಮತ್ತು ಪ್ರಕಾಶಕರಲ್ಲಿ ವಿನಂತಿ.

- ಇತ್ತೀಚಿನ ವರ್ಷಗಳಲ್ಲಿ ಪ್ರಕಟವಾದ ಇತಿಹಾಸಕ್ಕೆ ಸಂಬಂಧಿಸಿದ ಕೃತಿಯಾಗಿರಬೇಕು.
- ಪುಸ್ತಕದ ಎರಡು ಪ್ರತಿಗಳನ್ನು ಕಳುಹಿಸಿಕೊಡಬೇಕು.

**ಕಳುಹಿಸಿಕೊಡಬೇಕಾದ ವಿಳಾಸ:**


**ಸಂಪಾದಕರು, 'ಇತಿಹಾಸ ದರ್ಪಣ',**

# ೩೩ ಎ, ಐ.ಟಿ.ಐ ಕಾಲೇಜು ಹತ್ತಿರ, ಕೆಂಪೇಗೌಡನಗರ,

ವಿಶ್ವನೀಡಂ – ಅಂಚೆ, ಬೆಂಗಳೂರು-೫೬೦೦೯೧.

**ಮೊ: ೭೮೨೯೪೦೪೦೬೩**


---

# ನಿಜಾಮರ ಕಾಲದ ಕರ್ನಾಟಕದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಪರಿಸ್ಥಿತಿ : ವಿಶ್ಲೇಷಣೆ

–ಹಂ.ಗು. ರಾಜೇಶ್

ಹೈದರಾಬಾದಿನ ನಿಜಾಮರೆಂದರೆ ಸಾಮಾನ್ಯವಾಗಿ ಅವರ ಬಗೆಗೆ ನಮ್ಮಲ್ಲಿ ನಕಾರಾತ್ಮಕ ಮನೋಭಾವವು ಮೂಡುವಂತೆ ಕೆಲವು ಚರಿತ್ರೆಯ ಗ್ರಂಥಗಳು ರಚನೆಯಾಗಿವೆ. ಅವುಗಳಲ್ಲಿ ಉದಾಹರಿಸಬಹುದಾದ ಕೃತಿಯೆಂದರೆ *ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು.* ಇದರ ಜೊತೆಗೆ ಈ ಪ್ರದೇಶವು ಹಿಂದುಳಿದ ಪ್ರದೇಶವಾಗಿರುವುದರಿಂದ ಈ ಹಿಂದುಳಿದಿರುವಿಕೆಗೆ ನಿಜಾಮರ ಆಳ್ವಿಕೆಯೇ ಕಾರಣ ಎಂಬ ಮತ್ತೊಂದು ಬಗೆಯ ದೋರಣೆ ಕೂಡ ಪ್ರೇರಣೆ ನೀಡಿದೆ. ಈ ದೋರಣೆಯನ್ನು ಅಲ್ಲಗಳೆಯಲಾಗದಿದ್ದರೂ, ಅದಕ್ಕೆ ಮೂಲ ಕಾರಣಗಳನ್ನು ಹುಡುಕಿ ವಿಶ್ಲೇಷಿಸಬೇಕಾಗುತ್ತದೆ. ಯಾವಾಗಲೂ ರಾಜಧಾನಿ ಕೇಂದ್ರಿತ ಪ್ರದೇಶಗಳು ಅಭಿವೃದ್ಧಿಗೆ ಒಳಗಾದರೆ, ಪರಿಧಿಯಲ್ಲಿನ ಪ್ರದೇಶಗಳು ನಿರ್ಲಕ್ಷಕ್ಕೆ ಒಳಗಾಗುವುದು ಸಹಜ. ಉದಾಹರಣೆಗೆ: ಆಧುನಿಕ ಭಾರತದ ಮಾದರಿ ಸಂಸ್ಥಾನಗಳಲ್ಲಿ ಒಂದಾದ ಮೈಸೂರು ಸಂಸ್ಥಾನದಲ್ಲಿಯೇ ಇದ್ದ, ಅದರಲ್ಲಿಯೂ ಇತ್ತೀಚಿನವರೆಗೂ ಮೈಸೂರು ಜಿಲ್ಲೆಯ ಭಾಗವೇ ಆಗಿದ್ದ ಚಾಮರಾಜ ನಗರ ಜಿಲ್ಲೆಯು ಇಂದಿಗೂ ಕರ್ನಾಟಕದ ಅತ್ಯಂತ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿದೆ. ಇದೇ ರೀತಿಯ ಪರಿಸ್ಥಿತಿ ಹೈದರಾಬಾದ್ ಕರ್ನಾಟಕದ್ದು ಆಗಿದೆ. ಇದನ್ನು ಸರಿಯಾದ ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿದೆ. ಎಲ್ಲದಕ್ಕೂ ನಿಜಾಮರೇ ಮೂಲ ಕಾರಣವೆನ್ನುವುದು ಕಾಮಾಲೆಯ ನೋಟವಾಗಬಹುದು. ಈ ಹಿನ್ನಲೆಯಲ್ಲಿ ನಿಜಾಮರ ಕಾಲದಲ್ಲಿ ಹೈದರಾಬಾದ್ ಕರ್ನಾಟಕದ ನಿಜವಾದ ಸಾಮಾಜಿಕ ಮತ್ತು ಧಾರ್ಮಿಕ

ಪರಿಸ್ಥಿತಿ ಹೇಗಿತ್ತು ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಿದೆ. ಅಂತಹ ಸಣ್ಣ ಪ್ರಯತ್ನ ಇದಾಗಿದೆ.

ಉತ್ತರ ಭಾರತದಲ್ಲಿ ಪ್ರಬಲರಾಗಿದ್ದ ಮೊಘಲ್ ದೊರೆ ಔರಂಗಜೇಬನ ಮರಣಾನಂತರ ಪ್ರವರ್ಧಮಾನಕ್ಕೆ ಬಂದರು. ೧೭೧೩ರಲ್ಲಿ ಮೊಘಲ್ ದೊರೆಯಾಗಿದ್ದ ಫರೂಕ್ ಶಿಯಾರನು ಔರಂಗಜೇಬನ ನೆಚ್ಚಿನ ದಂಡನಾಯಕನಾಗಿದ್ದ ಮೀರ್ ಕಮರುದ್ದೀನನನ್ನು 'ನಿಜಾಮ್-ಉಲ್-ಮುಲ್ಕ್-ಫಿರೋಜ್‌ಜಂಗ್' ಎಂಬ ಬಿರುದಿನೊಂದಿಗೆ ದಖ್ಖನ್ನಿನ ಸುಬೇದಾರನನ್ನಾಗಿ ನೇಮಿಸಿದ (ಮಹಾಬಲೇಶ್ವರಪ್ಪ, ೧೯೯೭, ಪು:೧೨). ಮುಂದೆ ಮೊಘಲರ ಆಸ್ಥಾನದಲ್ಲಿ ರಾಜಕೀಯ ಮೇಲಾಟ ನಡೆದು ಕಮರುದ್ದೀನ್ ಅಥವಾ ನಿಜಾಮ್-ಉಲ್-ಮುಲ್ಕ್‌ನು ಇದರಿಂದ ದೂರ ಉಳಿದನು. ಆದರೆ ತನ್ನ ಅಸ್ತಿತ್ವಕ್ಕೆ ಕುತ್ತು ಬಂದ ಪರಿಣಾಮ ೧೭೨೪ರಲ್ಲಿ ಶಿಖಾರ್ ಖೇಡ್ ಎಂಬ ಯುದ್ಧದಲ್ಲಿ ಮುಬೇರಿಜ್ ಖಾನ್‌ನನ್ನು ಸೋಲಿಸಿ ನಿಜಾಮನು ಸ್ವತಂತ್ರ ಸಂಸ್ಥಾನವನ್ನು ದಖ್ಖನ್ನಿನಲ್ಲಿ ಸ್ಥಾಪಿಸಿದನು. ಇವನು ಉತ್ತರದ ಮಾಳವದಿಂದ ದಕ್ಷಿಣದ ತಿರುಚನಾಪಳ್ಳಿಯವರೆಗಿನ ಭಾಗವನ್ನು ಆಳುತ್ತಿದ್ದ. ಮುಂದೆ ಮೊಘಲ್ ಸುಲ್ತಾನ ಮಹಮದ್ ಷಾ ಇವನಿಗೆ 'ಅಸಫ್ ಜಹಾ' ಎಂಬ ಬಿರುದನ್ನು ನೀಡಿದನು. ಅಂದಿನಿಂದ ಇಂದಿನವರೆಗೂ ಇವನ ಮನೆತನವು 'ಅಸಫ್ ಜಾಹಿ' ಎಂಬ ಹೆಸರಿನಿಂದಲೇ ಗುರುತಿಸಲ್ಪಡುತ್ತದೆ.

ಡೆಖ್ಖನ್ ಎಂಬ ಪದದ ಮೂಲ ಅರ್ಥ ಬಲಗೈ. ಆರ್ಯರು ಪಂಜಾಬನ್ನು ಪಶ್ಚಿಮದಿಂದ ಪ್ರವೇಶಿಸಿದಾಗ ಅವರ ಬಲಭಾಗದ ಭೂಮಿಯನ್ನು ದಕ್ಷಿಣ ಎಂದು ಕರೆದರು. ಈ ದಕ್ಷಿಣ ಎಂಬ ಪದವು ಪರ್ಷಿಯನ್ ಶಬ್ದವಾದ 'ದಯನ್' ಮತ್ತು ಹಿಂದೂಸ್ಥಾನಿ ಶಬ್ದವಾದ 'ದಹಿನ್'ನೊಂದಿಗೆ ಸಂಬಂಧ ಹೊಂದಿದ್ದು ಇವೆರಡರ ಅರ್ಥಕೂಡ ಬಲಗೈಯನ್ನೇ ಸೂಚಿಸುತ್ತದೆ (Haqimadi, 1978, Pp:34). ಆದರೆ ಇಂದು ಸಾಮಾನ್ಯವಾಗಿ ತುಂಗಭದ್ರೆಯ ದಕ್ಷಿಣದ ಪ್ರದೇಶವನ್ನು ಸದರನ್ ಇಂಡಿಯ ಅಥವಾ ದಕ್ಷಿಣ ಭಾರತ ಎಂತಲೂ ಗೋದಾವರಿ ಮತ್ತು ತುಂಗಭದ್ರಾ ನಡುವಿನ ಮೈದಾನ ಪ್ರದೇಶವನ್ನು ಪ್ಲಾಟ್ಯು ಆಫ್ ಡೆಖಿನ್ ಅಥವಾ ದಖ್ಖನ್ ಪ್ರಸ್ಥಭೂಮಿ ಎಂದು ಗುರುತಿಸುತ್ತಾರೆ.

ಮಾರ್ಚ್ ೧೭೨೪ ರಿಂದ 'ಮೀರ್ ಕಮರುದ್ದಿನ್, ನಿಜಾಮ್-ಉಲ್-ಮುಲ್ಕ್, ಅಸಫ್ ಜಹಾ' ನಿಂದ ಆರಂಭವಾದ ಅಸಫ್ ಜಾಹಿ ಮನೆತನವು ಜೂನ್ ೧೯೪೮ ರವರಗೆ ಆಳ್ವಿಕೆ ನಡೆಸಿತು. ಈ ಅವಧಿಯಲ್ಲಿ ಹತ್ತು ಮಂದಿ ನಿಜಾಮರು ಆಳ್ವಿಕೆ ನಡೆಸಿದರು (John Law, 1914 Pp:28-29). ಆದರೆ ಇವರಲ್ಲಿ ಆಸಫ್ ಜಹಾನ ನಂತರ ಅಧಿಕಾರಕ್ಕೆ ಬಂದ ಮುಜಾಫ್ಫರ್ ಜಂಗ್, ನಾಸಿರ್ ಜಂಗ್ ಮತ್ತು ಸಲಾಬತ್ ಜಂಗ್‌ರನ್ನು ಅಧಿಕೃತ ನಿಜಾಮರೆಂದು ಒಪ್ಪುವುದಿಲ್ಲ. ಆದ್ದರಿಂದ ಏಳು ಜನ ನಿಜಾಮರನ್ನಷ್ಟೆ ಅಧಿಕೃತವೆಂದು ಪರಿಗಣಿಸಲಾಗಿದೆ.

೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ದಕ್ಷಿಣ ಭಾರತದಲ್ಲಿ ತಮ್ಮ ಪರಮಾಧಿಕಾರವನ್ನು ಸ್ಥಾಪಿಸ ಬಯಸಿದ್ದ ಬ್ರಿಟಿಷರು ನಿಜಾಮ ಸಂಸ್ಥಾನವನ್ನು ಒಂದು ಬಫ್ಫರ್ ರಾಜ್ಯವನ್ನಾಗಿ ಬಳಸಿಕೊಂಡರು. ಟಿಪ್ಪುವಿನ ವಿರುದ್ಧದ ಹೋರಾಟಕ್ಕಾಗಿ ಬ್ರಿಟಿಷರು ನಿಜಾಮನೊಂದಿಗೆ ೧೭೯೮ರಲ್ಲಿ ಒಂದು ಒಪ್ಪಂದ ಮಾಡಿಕೊಂಡರು. ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ (೧೭೯೯) ಟಿಪ್ಪು ಮರಣ ಹೊಂದಿದ ನಂತರ ಬ್ರಿಟಿಷರು

ಹಿಂದಿನ ಒಪ್ಪಂದದ ಪ್ರಕಾರ ಇಂದು ಹೈದರಾಬಾದ್ ಕರ್ನಾಟಕ ಎಂದು ಕರೆಯುವ ಬೀದರ್, ಗುಲ್ಬರ್ಗ, ಯಾದಗೀರ್, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳನ್ನು ನಿಜಾಮನಿಗೆ ಕಾಣಿಕೆಯಾಗಿ ನೀಡಿದರು (ಮಹಾಬಲೇಶ್ವರಪ್ಪ, ಪು:೧೪). ಅಂದಿನಿಂದ ಕನ್ನಡ ಭಾಷಿಕ ಪ್ರದೇಶ ೧೯೪೮ರವರೆಗೆ ನಿಜಾಮರ ಆಳ್ವಿಕೆಗೆ ಒಳಗಾಯಿತು.

ಔರಂಗಾಬಾದ್ ನಿಜಾಮರ ಮೊದಲ ರಾಜಧಾನಿಯಾಗಿತ್ತು. ಸಿಕಂದರ್ ಜಾಹ (೧೮೦೩-೧೮೨೯)ನ ಕಾಲದಲ್ಲಿ ಔರಂಗಾಬಾದಿನ ಬದಲು ಹೈದರಾಬಾದ್ ರಾಜಧಾನಿಯಾಯಿತು (ಜಾಗಿರದಾರ ಮತ್ತು ಇತರರು, ಪು:೨೧). ಅಂದಿನಿಂದ ಈ ಮನೆತನದವರು ಹೈದರಾಬಾದಿನ ನಿಜಾಮರೆಂದೇ ಪ್ರಸಿದ್ಧರಾದರು.

ಹೈದರಾಬಾದ್ ಕರ್ನಾಟಕವು ಹಿಂದಿನಿಂದಲೂ ಧಾರ್ಮಿಕ ಸಾಮರಸ್ಯದ ಮತ್ತು ಸಾಮಾಜಿಕ ಭಾವೈಕ್ಯತೆಯ ಕೇಂದ್ರವಾಗಿದೆ. ಸರ್ವಧರ್ಮಗಳ ನೆಲೆವೀಡಾಗಿರುವ ಹೈದರಾಬಾದ್ ಕರ್ನಾಟಕದಲ್ಲಿ ಹಿಂದೂ, ಬೌದ್ಧ, ಜೈನ, ವೀರಶೈವ, ಮುಸ್ಲಿಂ, ಸಿಖ್, ಕ್ರೈಸ್ತ ಮೊದಲಾದ ಧರ್ಮಗಳ ಪವಿತ್ರ ಕೇಂದ್ರಗಳಿವೆ. ೧೨ನೇ ಶತಮಾನದಲ್ಲಿ ವಚನ ಚಳವಳಿಯ ಕೇಂದ್ರವಾದ ಬಸವ ಕಲ್ಯಾಣ ಕೂಡ ಇಲ್ಲಿಯೇ ಇದೆ. ಆದ್ಯ ವಚನಕಾರನಾದ ಜೇಡರ ದಾಸಿಮಯ್ಯನು ಸುರಪುರ ತಾಲ್ಲೂಕಿನ ಮುದನೂರಿಗೆ ಸೇರಿದವನು (ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್, ೫೫೭). ಸೌಹಾರ್ದತೆ ಮತ್ತು ಸಾಮರಸ್ಯಕ್ಕೆ ಹೆಸರಾದ ಸೂಫಿ ಸಂತರ ನೆಲೆ ಇದಾಗಿದೆ. ೧೩ನೇ ಶತಮಾನದ ಅಂತ್ಯದಲ್ಲಿ ಗುಲ್ಬರ್ಗಾಗೆ ಬಂದು ನೆಲೆಸಿದ ಖ್ವಾಜಾ ಬಂದೇ ನವಾಜ್ ಸೂಫಿ ಪಂಥವನ್ನು ಪ್ರಸಾರ ಮಾಡಿದನು. ಹಲವು ಪರಂಪರೆಗಳ ಹುಟ್ಟಿಗೂ ಇದು ಕಾರಣವಾಯಿತು. ಗುಲ್ಬರ್ಗದ ಕೇಶವಚೈತನ್ಯ, ಉಳವಿ ಚೆನ್ನಬಸವೇಶ್ವರ, ಶಿರಹಟ್ಟಿ ಫಕೀರಪ್ಪ, ವಡಬಾಳದ ನಾಗನಾಥ, ಯಮನೂರಪ್ಪ, ನರಸಿಂಹ ಸರಸ್ವತಿ, ಕೊಡೇಕಲ್ ಬಸವಣ್ಣ, ತಿಂತಿಣಿ ಮೋನಪ್ಪ ಮೊದಲಾದ ನೂರಾರು ಸೂಫಿ ಸಂತರು ಈ ಪ್ರದೇಶದಿಂದ ಬಂದರು ಮತ್ತು ಸಕ್ರಿಯರಾಗಿದ್ದರು (ರಹಮತ್, ಕರ್ನಾಟಕದ ಸೂಫಿಗಳು ನೋಡಿ). ಅದೇ ರೀತಿ ೧೮-೧೯ನೇ ಶತಮಾನದಲ್ಲಿ ಈ ಪ್ರದೇಶದಲ್ಲಿ ತತ್ವಪದ ಪರಂಪರೆಯು ಸಮೃದ್ಧವಾಗಿ ಬೆಳೆಯಿತು. ಮರಕುಂದಿ ಬಸವಣ್ಣಪ್ಪ, ಆಣದೂರದ ಜಹೂರ ಅಲಿಷಾ, ಬೀದರದ ಕಾಶಿನಾಥ ಸಿಂಧೆ ಮೊದಲಾದ ನೂರಾರು ತತ್ವಪದಕಾರರು ಪ್ರಸಿದ್ಧರು (ಗುರುಲಿಂಗಪ್ಪ, ಬೀದರ್ ಜಿಲ್ಲೆಯ ತತ್ವಪದಕಾರರು ಕೃತಿ ನೋಡಿ). ಬಹಮನಿ ಸುಲ್ತಾನರ ನಂತರ ಬಂದ ಬಿಜಾಪುರದ ಆದಿಲ್ ಷಾಹಿಗಳ ನಿಯಂತ್ರಣಕ್ಕೂ ಈ ಪ್ರದೇಶದ ಕೆಲಭಾಗ ಒಳಪಟ್ಟಿತ್ತು. ಆದಿಲ್ ಷಾಹಿಗಳ ಎರಡನೇ ಇಬ್ರಾಹಿಂನು ಹಿಂದೂ ಸಂಗೀತಕ್ಕೆ ಮಾರುಹೋಗಿದ್ದನು ಮತ್ತು ಸರಸ್ವತಿಯ ಆರಾಧಕನಾಗಿದ್ದನು. ಹೀಗೆ ಧಾರ್ಮಿಕ ಸಾಮರಸ್ಯಕ್ಕೆ ಮತ್ತು ಸೌಹಾರ್ಧತೆಗೆ ಹೆಸರಾದ ಈ ನೆಲವು ೧೭೪೪ರಲ್ಲಿ ನಿಜಾಮ ಸಂಸ್ಥಾನದ ಆಳ್ವಿಕೆಗೆ ಒಳಪಟ್ಟಿತು.

ಪ್ರಬಂಧದ ವಿಷಯದ ದೃಷ್ಟಿಯಿಂದ 'ನಿಜಾಮ' ಪದದ ಅರ್ಥ ಹೇಳಲೇಬೇಕು. 'ನಿಜಾಮ' ಎಂದರೆ ವ್ಯವಸ್ಥಾಪಕ, ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಳ್ಳುವವನು, ರಕ್ಷಕ, ನಿಯಾಮಕ ಎಂದಾಗುತ್ತದೆ (ಜಯಶೆಟ್ಟಿ, ೯). ಪ್ರಜೆಗಳ ಯೋಗಕ್ಷೇಮ ನೋಡಿಕೊಳ್ಳುವವನು ಅರ್ಥಾಥ್ 'ನಿಜಾಮ' ಎಂದು ಬಿರುದಾಂಕಿತರಾದ 'ಅಸಫ್ ಜಾಹಿ' ಮನೆತನದವರು ಸುಮಾರು ೧೫೦ ವರ್ಷಗಳ ಆಳ್ವಿಕೆಗೆ ಬೀದರ್, ಅವಿಭಜಿತ ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳನ್ನು ಒಳಗೊಂಡ ಪ್ರದೇಶಗಳಲ್ಲಿನ ಜನರ

ಜೀವನ ಹೇಗಿತ್ತು? ಅವರ ಸ್ಥಾನಮಾನ ಹೇಗಿತ್ತು? ತಮ್ಮ ಸಂಸ್ಕೃತಿ ಮತ್ತು ಆಚರಣೆಗಳನ್ನು ಅನುಸರಿಸುವ ವಿಚಾರದಲ್ಲಿ ನಿಜಾಮರು ನಡೆದುಕೊಳ್ಳುತ್ತಿದ್ದರು? ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಸಲುವಾಗಿ ನಿಜಾಮರ ಕಾಲದ ಕನ್ನಡ ಪ್ರದೇಶಗಳ ಸಾಮಾಜೋ-ಧಾರ್ಮಿಕ ಪರಿಸ್ಥಿತಿಯನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ.

ಹೈದರಾಬಾದ್ ಸಂಸ್ಥಾನವು ೮೨.೬೯೮ ಚದರ ಮೈಲಿ ವಿಸ್ತಾರವನ್ನು ಹೊಂದಿತ್ತು. ಅಂದರೆ ಇಂಗ್ಲೆಂಡ್ ಮತ್ತು ಸ್ಕಾಟ್‌ಲ್ಯಾಂಡ್ ದ್ವೀಪಗಳನ್ನು ಒಗ್ಗೂಡಿಸಿದರೆ ಎಷ್ಟು ವಿಶಾಲವಾಗುವುದೋ ಅಷ್ಟು ವಿಶಾಲತೆಯನ್ನು ಹೈದರಾಬಾದ್ ಸಂಸ್ಥಾನ ಹೊಂದಿತ್ತು (Haqimadi, ೩೪). ೧೯೧೧ರಲ್ಲಿ ಹೈದರಾಬಾದ್ ಸಂಸ್ಥಾನದ ಜನಸಂಖ್ಯೆ ೧,೩೩,೭೪,೬೭೬ ಇತ್ತು. ಅವರಲ್ಲಿ ಹಿಂದೂಗಳು–೮೬.೯% (೧,೧೬,೨೬,೧೪೬), ಮುಸ್ಲಿಮರು– ೧೦.೩% (೧೩,೮೦,೯೯೦), ಕ್ರಿಶ್ಚಿಯನ್ನರು– ೦.೪% (೫೪,೨೯೬) ಮತ್ತು ಜೈನರು– ೦.೧೫% (೨೧,೦೨೬) ಇದ್ದರು (John Law, ೬೮). ಉರ್ದು ಸಂಸ್ಥಾನದ ಅಧಿಕೃತ ಭಾಷೆಯಾಗಿತ್ತು. ಆದರೆ ತೆಲುಗು, ಮರಾಠಿ ಮತ್ತು ಕನ್ನಡ ಬಹುಸಂಖ್ಯಾತರ ಭಾಷೆಯಾಗಿತ್ತು. ೧೯೧೧ರ ಜನಗಣತಿ ಪ್ರಕಾರ ತೆಲುಗು ಭಾಷಿಕರು– ೪೭.೬% (೬೩,೬೭,೫೭೮), ಮರಾಠಿ ಭಾಷಿಕರು– ೨೬% (೩೪,೯೮,೭೫೮) ಮತ್ತು ಕನ್ನಡಿಗರು ೧೨.೫% (೧೬,೮೦,೦೦೫) ಇದ್ದರೆ ಉರ್ದು ಭಾಷಿಕರು–೧೦% (೧೩,೪೧,೬೨೨) ಇದ್ದರು (John Law, ೭೨). ೧೯೪೧ರ ಜನಗಣತಿಯ ಪ್ರಕಾರ ಸಂಸ್ಥಾವದ ಜನಸಂಖ್ಯೆ ೧,೪೪,೦೦೧೪೮ ಇತ್ತು. ಅದರಲ್ಲಿ ತೆಲುಗು ಭಾಷಿಕರು– ೪೮%, ಮರಾಠಿಗಳು– ೨೪%, ಕನ್ನಡಿಗರು–೧೨ ಮತ್ತು ಉರ್ದು ಭಾಷಿಕರು ೧೦% ಇದ್ದರು (ಜಯಶೆಟ್ಟಿ, ೧೪). ೧೯೧೧ ರಿಂದ ೧೯೪೧ರ ನಡುವಿನ ಈ ೩೦ ವರ್ಷಗಳಲ್ಲಿ ಭಾಷಿಕವಾಗಿ ಅಷ್ಟೇನೂ ಗಣನೀಯವಾದ ಬದಲಾವಣೆ ಆಗಲಿಲ್ಲ. ಆದರೆ ಧಾರ್ಮಿಕವಾಗಿ ಗಮನಿಸಿದಾಗ ಮುಸ್ಲಿಮರು ೩% ಹೆಚ್ಚಾಗಿದ್ದು, ಹಿಂದೂಗಳು– ೬% ಕಡಿಮೆಯಾಗಿತ್ತು (ಜಯಶೆಟ್ಟಿ, ೧೪). ಇದಕ್ಕೆ ಕಾರಣಗಳಿವೆ. ೧೯೨೦ರ ದಶಕದಲ್ಲಿ ಉಂಟಾದ ಮಹಾ ಆರ್ಥಿಕ ಮುಗ್ಗಟ್ಟಿನಿಂದ ದೇಶದ ಜನಸಂಖ್ಯೆಯೇ ಕ್ಷೀಣಿಸಿತು. ಅದರ ಜೊತೆಗೆ ಒಂದು ಕಡೆ ಮತಾಂತರ ಮತ್ತೊಂದು ಕಡೆ ಕೋಮುಗಲಭೆ, ಇವೆಲ್ಲವರ ಜೊತೆಗೆ ಮರಣ ಪ್ರಮಾಣವನ್ನೂ ಕಡೆಗಣಿಸುವಂತಿರಲಿಲ್ಲ.

ಜಾನ್ ಲಾ ಅವರು ೧೯೧೪ರಲ್ಲಿ ಬರೆಯುವಂತೆ: “ಕಳೆದ ೧೦ ವರ್ಷಗಳಲ್ಲಿ ಕ್ರಿಶ್ಚಿಯನ್ ಮಿಷನರಿಗಳು ಮಾಡಿರುವ ಹಲವಾರು ಮತಾಂತರಗಳಲ್ಲಿ ತುಳಿತಕ್ಕೆ ಒಳಗಾದ ವರ್ಗದವರ ಸಂಖ್ಯೆಯೇ ಹೆಚ್ಚಾಗಿದೆ. ಒಂದು ಅಂದಾಜಿನ ಪ್ರಕಾರ ಹತ್ತು ವರ್ಷಗಳಲ್ಲಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡವರ ಸಂಖ್ಯೆ ೨೬೭೦೦. ಆದರೆ ಮಿಷನರಿಗಳು ಇದಕ್ಕಿಂತಲೂ ಹೆಚ್ಚು ಮತಾಂತರ ಮಾಡಿರುವುದರಲ್ಲಿ ಅನುಮಾನವಿಲ್ಲ. ಏಕೆಂದರೆ ಪ್ರಸ್ತುತ ಸಮಯದಲ್ಲಿ ಹೈದರಾಬಾದ್ ರಾಜ್ಯದಲ್ಲಿ ಪ್ರತೀ ವರ್ಷ ೭೦೦೦ ಜನರು ಮತಾಂತರಗೊಳ್ಳುತ್ತಿದ್ದಾರೆ” ಎಂದಿದ್ದಾರೆ (John Law, 69). ಕ್ರಿಶ್ಚಿಯನ್ನರ ವಿಚಾರಕ್ಕೆ ನಿಜಾಮನಾಗಲಿ, ಮುಸ್ಲಿಮರಾಗಲಿ ಹೋಗುತ್ತಿರಲಿಲ್ಲ. ಏಕೆಂದರೆ ಬ್ರಿಟಿಷ್ ಅಧಿಕಾರಿಗಳ ಸಮುದಾಯಕ್ಕೆ ಸೇರಿದ್ದ ಕ್ರಿಶ್ಚಿಯನ್ನರ ಬಗೆಗೆ ನಿಜಾಮನ ಅಧಿಕಾರಿಗಳು ಮೃದುಧೋರಣೆ ತಳೆದಿದ್ದರು. ಇದರಿಂದಾಗಿ ಹೆಚ್ಚು ಹಿಂದೂಗಳು ತೀವ್ರವಾಗಿ ನೋವು ಅನುಭವಿಸಬೇಕಾಗಿತ್ತು (ಮಹಾಬಲೇಶ್ವರಪ್ಪ, ೨೦).

ಕೋಮುವಾದದ ವಿಚಾರಕ್ಕೆ ಮೊದಲು ಮರಣ ಪ್ರಮಾಣವನ್ನು ಅವಲೋಕಿಸೋಣ. ಜಾನ್ ಲಾ ಹೇಳುವಂತೆ: "ಹುಟ್ಟಿದ ಮಕ್ಕಳಲ್ಲಿ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳೇ ಹೆಚ್ಚಿನ ಸಂಖ್ಯೆಯಲ್ಲಿ ಒಂದು ವರ್ಷದ ಅವಧಿಯೊಳಗೆ ಮರಣವನ್ನಪ್ಪುತ್ತಿದ್ದರು. ಆದರೆ ೫ ವರ್ಷ ಕಳೆಯುವುದರಲ್ಲಿ ಹೆಣ್ಣು ಮಕ್ಕಳ ಸಂಖ್ಯೆಗಿಂತ ಗಂಡುಮಕ್ಕಳ ಸಂಖ್ಯೆ ಹೆಚ್ಚಾಗುತ್ತದೆ ಮತ್ತು ಕೊನೆಗೆ ಮಹಿಳೆಯರ ಸ್ಥಾನವು ಗಣನೀಯವಾಗಿ ಕ್ಷೀಣಿಸುತ್ತದೆ" ಎಂದಿದ್ದಾರೆ. ಮುಂದುವರೆದು "ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆಯಾಗಲು ಬೇಗ ಮದುವೆ (ಬಾಲ್ಯವಿವಾಹ) ಮಾಡುವುದೂ ಒಂದು ಕಾರಣ. ನೈಜ ಸಂಗತಿ ಎಂದರೆ ಪ್ರಸ್ತುತ, ರಾಜ್ಯದಲ್ಲಿ ಮದುವೆಯಾದ ಹೆಣ್ಣುಮಕ್ಕಳು ೨೪,೦೦೬ ಮತ್ತು ಹತ್ತು ವರ್ಷದೊಳಗೆ ವಿಧವೆಯಾದವರು ೬,೭೯೨ ಹಾಗೂ ಮದುವೆಯಾದ ೨೭,೯೧೩ರಲ್ಲಿ ೫ವರ್ಷದೊಳಗಿನ ವಯೋಮಾನದ ವಿಧವೆಯಾದವರ ಸಂಖ್ಯೆ ೧,೨೫೮. ಆದರೂ ಅನೇಕ ಪ್ರಕರಣಗಳಲ್ಲಿ ಮದುವೆಗಳು ಕೇವಲ ನಿಶ್ಚಿತಾರ್ಥಗಳಿಗೆ ಸೀಮಿತಗೊಂಡಿದೆ ಎನ್ನುವುದರಲ್ಲಿ ಅನುಮಾನವಿಲ್ಲ ಎಂಬ ಹೇಳಿಕೆಯನ್ನು ಪುಷ್ಟೀಕರಿಸುತ್ತವೆ" ಎಂದಿದ್ದಾರೆ (John Law, 70). ಹೆಚ್ಚಿನ ಸ್ತ್ರೀ ಮರಣ ಪ್ರಮಾಣವು ಕೆಳವರ್ಗದ ಹಿಂದು ಮಹಿಳೆಯರಲ್ಲಿ ಹೆಚ್ಚಾಗಿತ್ತು. ಚಿಕ್ಕವಯಸ್ಸಿಗೆ ವಿವಾಹ ಮಾಡುವ ಪದ್ಧತಿಯು ಹಿಂದೂಗಳಲ್ಲಿ ಹೆಚ್ಚಾಗಿತ್ತು. ಬಹುಶಃ ಹೆಣ್ಣು ಮಕ್ಕಳಿಗೆ ಸಮಾಜದಲ್ಲಿ ಯಾವುದೇ ರೀತಿಯ ರಕ್ಷಣೆ ಇಲ್ಲವೆಂದು ಬೇಗ ಮದುವೆ ಮಾಡುತ್ತಿದ್ದರೆನಿಸುತ್ತದೆ.

ಇನ್ನು ಕೋಮುವಾದದ ವಿಚಾರ- ಎಲ್ಲ ನಿಜಾಮರನ್ನು ಖಳನಾಯಕರಂತೆ ಅನುಮಾನದಿಂದ ನೋಡುವುದು ಪೂರ್ವಾಗ್ರಹವಾಗುತ್ತದೆ. ಏಕೆಂದರೆ ಹೈದರಾಬಾದ್ ಸಂಸ್ಥಾನದ ಕೊನೆಯ ನವಾಬ ಮೀರ್ ಉಸ್ಮಾನ್ ಅಲಿಖಾನ್ (೧೯೧೧-೧೯೪೮) ಅಧಿಕಾರಕ್ಕೆ ಬರುವವರೆಗೂ ರಾಜ್ಯದಲ್ಲಿ ಕೋಮು ದ್ವೇಷವಾಗಲಿ, ಕೋಮುಗಲಭೆಗಳಾಗಲಿ ಚರಿತ್ರೆಯಲ್ಲಿ ದಾಖಲಾದ ಪ್ರಕರಣಗಳು ಗೌಣ (ಜಯಶೆಟ್ಟಿ, ೧೧). ಇಯಾನ್ ಕಾಪ್‌ಲ್ಯಾಂಡ್ ಅವರು: ೨೦ನೇ ಶತಮಾನದ ಆರಂಭದ ಭಾರತದಲ್ಲಿ ನಾಟಕೀಯ ರೀತಿಯಲ್ಲಿ ಹಿಂದೂ-ಮುಸ್ಲಿಂ ಕೋಮುವಾದ, ದಂಗೆಗಳು, ಕಣ್ಣಿಗೆ ರಾಚುವಂತೆ ಕಾಣುತ್ತವೆ" ಎಂದು ಅಭಿಪ್ರಾಯಪಡುತ್ತಾರೆ (Modern Asian studies 22, 4(1988) Pp:783-814).

ಮೀರ್ ಉಸ್ಮಾನ್ ಅಲಿಖಾನನ ತಂದೆಯಾದ ಮೀರ್ ಮಹಬೂಬ ಅಲಿಯ (೧೮೬೯-೧೯೧೧) ಕಾಲದಲ್ಲಿ ರಾಜ್ಯದ ಜನತೆ ಬಹಳ ನೆಮ್ಮದಿಯಿಂದ ಬಾಳುತ್ತಿದ್ದರು. ಮಹಬೂಬ ಅಲಿಖಾನನು ಉದಾರಿಯೂ, ಶಾಂತಿ ಪ್ರಿಯನೂ ಆಗಿದ್ದನು. ಹಿಂದೂ-ಮುಸಲ್ಮಾನ ಎರಡೂ ಜನಾಂಗದ ಹಿತವನ್ನು ಕಾಪಾಡುವಲ್ಲಿ ಮುತುವರ್ಜಿ ವಹಿಸುತ್ತಿದ್ದನು. ಜಾತಿ ಆಧಾರದ ಮೇಲೆ ಯಾವ ಭೇದಭಾವವೂ ಮಾಡುತ್ತಿರಲಿಲ್ಲ. ಧರ್ಮ ನಿರಪೇಕ್ಷ ಭಾವನೆಯಿಂದಲೇ ಆಡಳಿತ ನಡೆಸುತ್ತಿದ್ದನು (ಜಯಶೆಟ್ಟಿ, ೧೧). ಅಂತಹ ಕೆಲವು ಪ್ರಸಂಗಗಳನ್ನು ಸ್ಮರಿಸಬಹುದು.

ನಿಜಾಮನ ವಿಶ್ವಾಸ ಸಂಪಾದಿಸುವುದಕ್ಕಾಗಿ, ಅಚ್ಯುತರಾವ್ ಎಂಬ ಸುಭೇದಾರನು ಒಮ್ಮೆ ನಿಜಾಮನಲ್ಲಿ ತಾನು ಇಸ್ಲಾಂ ಧರ್ಮವನ್ನು ಸ್ವೀಕರಿಸುತ್ತೇನೆಂದು ವಿನಂತಿಸಿದನು. ಆಗ ನಿಜಾಮನಾದ ಮೀರ ಮಹಬೂಬ ಅಲೀಖಾನನು ಹೀಗೆ ಹೇಳಿದನು: "ನೀನು ಇಸ್ಲಾಂ ಧರ್ಮವನ್ನು ಸ್ವೀಕರಿಸಲು ಬಯಸುವುದಾದರೆ, ಮೊದಲು ನಿನ್ನ ಸುಭೇದಾರಿ

ಹುದ್ದೆಯನ್ನು ಬಿಡಬೇಕಾಗುತ್ತದೆ. ಯಾಕೆಂದರೆ ಈ ಹುದ್ದೆ ಇರುವುದು ಬರಿ ಬ್ರಾಹ್ಮಣರಿಗಾಗಿ, ಮುಸಲ್ಮಾನರಿಗಲ್ಲ" (ಜಯಶೆಟ್ಟಿ, ೧೧).

ಇದೇ ರೀತಿಯ ಇನ್ನೊಂದು ಪ್ರಸಂಗವನ್ನು ನೋಡಬಹುದು. ರಾಜ್ಯದ ಪ್ರಧಾನಮಂತ್ರಿಯಾಗಿದ್ದ ಮಹಾರಾಜಾ ಕಿಶನ್ ಪ್ರಸಾದ್ ತಮ್ಮ ಪ್ರಭುವಿನ ಧರ್ಮನಿರಪೇಕ್ಷತೆಗೆ ಹಾಗೂ ಉದಾರತೆಗೆ ಮಾರುಹೋಗಿದ್ದನು. ಈ ಹಿಂದೂ-ಮುಸ್ಲಿಂ ಎಂಬುದರಲ್ಲಿ ಅರ್ಥವಿಲ್ಲವೆಂದು ತಮ್ಮ ಮಗನಿಗೆ 'ಖ್ವಾಜಾ ಪ್ರಸಾದ' ಎಂದು ನಾಮಕರಣ ಮಾಡಿದನು. ಅಲ್ಲದೆ ತನ್ನ ಮಗಳನ್ನು ಒಬ್ಬ ಮುಸಲ್ಮಾನನಿಗೆ ಕೊಟ್ಟು ವಿವಾಹಮಾಡಿದನು. ಇಂಥಾ ಉದಾರಿಯಾದ ಪ್ರಧಾನಿ ಕಿಶನ್ ಪ್ರಸಾದ್ ಕೂಡ ಒಮ್ಮೆ ತಾನು ಮುಸಲ್ಮಾನನಾಗಬೇಕೆಂಬ ಇಚ್ಛೆ ವ್ಯಕ್ತಪಡಿಸಿದನು. ಆಗ ಅವನನ್ನು ತರಾಟೆಗೆ ತೆಗೆದುಕೊಂಡ ನಿಜಾಮನು ಹೀಗೆ ನುಡಿದನು: "ನೀವು ಮುಸಲ್ಮಾನರಾಗುವುದಾದರೆ ಸಂತೋಷವಾಗಿ ಆಗಬಹುದು ನನ್ನದೇನೂ ಅಭ್ಯಂತರವಿಲ್ಲ. ಆದರೆ ಪರಂಪರೆಯಿಂದ ಹಿಂದೂಗಳಿಗಾಗಿಯೇ ಕಾಯ್ದಿರಿಸಿಕೊಂಡು ಬಂದಿರುವಂಥ ರಾಜ್ಯದ ಪ್ರಧಾನಮಂತ್ರಿ ಪಟ್ಟವನ್ನು ನೀವು ಬಿಡಬೇಕಾಗುತ್ತದೆ" (ಜಯಶೆಟ್ಟಿ, ೧೧). ಈ ಪ್ರಸಂಗಗಳು ಮೀರ್ ಮಹಬೂಬ ಅಲಿಖಾನನ ಧರ್ಮನಿರಪೇಕ್ಷತೆ ಹಾಗೂ ಧಾರ್ಮಿಕ ಸೌಹಾರ್ದತೆಯ 'ಮನೋಭಾವವಾಗಿತ್ತೆಂಬುದಕ್ಕೆ ನಿದರ್ಶನಗಳಾಗಿವೆ.

೧೮೯೩ರ ಫೆಬ್ರವರಿಯಲ್ಲಿ ಸ್ವಾಮಿ ವಿವೇಕಾನಂದರು ಸ್ವಲ್ಪಕಾಲ ಹೈದರಾಬಾದಿನಲ್ಲಿ ತಂಗಿದ್ದರು. ಆಗ ಸಿಕಂದರಾಬಾದಿನ ಮೇಹಬೂಬ ಕಾಲೇಜಿನಲ್ಲಿ ಒಂದು ಭಾರಿ ಸಭೆಯನ್ನು ಆಯೋಜಿಸಲಾಗಿತ್ತು. ವಿವೇಕಾನಂದರ ಭಾಷಣ ಕೇಳಲು ಜನರು ಜಾತಿ, ಧರ್ಮಗಳನ್ನು ಮರೆತು ಕಿಕ್ಕಿರಿದು ಸೇರಿದ್ದರು. ಎಲ್ಲಾ ಸಮುದಾಯದ ಜನರು ವಿವೇಕಾನಂದರ ಪ್ರಭಾವಕ್ಕೆ ಒಳಗಾದರು. ಎಲ್ಲಕ್ಕೂ ಮಿಗಿಲಾಗಿ ವಿವೇಕಾನಂದರನ್ನು ಬರಮಾಡಿಕೊಳ್ಳಲು ಹೈದರಾಬಾದಿನ ರೈಲ್ವೆ ನಿಲ್ದಾಣಕ್ಕೆ ನಿಜಾಮನ ಆಸ್ಥಾನದ ಮಂತ್ರಿಗಳಾದ ಸರ್.ಅಸಮದ್ ಜಾಹ ಮತ್ತು ಸರ್.ಖುರ್ಷಿದ್ ಜಾಹರು ಆಗಮಿಸಿದ್ದರು. ಈ ಮಂತ್ರಿಮಹೋದಯರು ಭಾರತದ ಎಲ್ಲಾ ಕಡೆಯ ಹಿಂದೂ ದೇವಾಲಯಗಳನ್ನು ಸಂದರ್ಶಿಸಿ, ಯಾತ್ರೆ ಮಾಡಿಬಂದ ಮೊದಲ ಮುಸಲ್ಮಾನರಾಗಿದ್ದರು. ನಿಜಾಮ ಮಹಬೂಬ್ ಅಲಿಖಾನನು ನಿಜದ ನೆಲೆಯಲ್ಲಿ ನಿಜಾಮ ಅರ್ಥಾತ್ ಪ್ರಜೆಗಳ ಯೋಗಕ್ಷೇಮ ನೋಡಿಕೊಳ್ಳುವವನಾಗಿದ್ದನು. 'ಹಿಂದೂ-ಮುಸ್ಲಿಂ ತನ್ನ ಎರಡು ಕಣ್ಣುಗಳು' ಎಂದು ಹೃದಯ ತುಂಬಿ ಹೇಳುತ್ತಿದ್ದನು. ಆದರೆ ಇಂಥಾ ಉದಾರಿಯೂ, ವಿಶಾಲ ಮನೋಭಾವವುಳ್ಳವನೂ ಆಗಿದ್ದ ಮಹಬೂಬ್ ಅಲಿಖಾನ್ ಹಾಗೂ ಮೂಲತಃ ಹಿಂದೂ ಆಗಿದ್ದ ಅವನ ಮಡದಿ ಜೋಹರಾಬೇಗಂಳ ಹೊಟ್ಟೆಯಲ್ಲಿ ಜನಿಸಿದವನೇ ಮೀರ್ ಉಸ್ಮಾನ್ ಅಲಿಖಾನ್ (ಜಯಶೆಟ್ಟಿ, ೧೦-೧೧). ಮೀರ್ ಉಸ್ಮಾನ್ ಅಲಿಖಾನನು (೧೯೧೧-೧೯೪೮) ಅಹಂಮಿಕೆಯ ವ್ಯಕ್ತಿಯಾಗಿದ್ದನು. ತನ್ನನ್ನು ತಾನು ತುರ್ಕಿ ಮನೆತನದ ವಂಶಸ್ಥನೆಂದೂ, ಭಾರತದಲ್ಲಿ ದಿಗ್ವಿಜಯವನ್ನು ಸಾಧಿಸಿ ಹಿಂದೂಗಳನ್ನು ಆಳಲು ಬಂದವನೆಂದೂ, ಹೀಗಾಗಿ ಹಿಂದೂಗಳು ತನ್ನ ಗುಲಾಮರೆಂದೂ ಭಾವಿಸಿದ್ದನು.

ಉಸ್ಮಾನ್ ಅಲಿಖಾನನ ಕಾಲದಲ್ಲಿ ಸರ್ಕಾರದಿಂದ ಪೂರ್ವಾನುಮತಿ ಪಡೆಯದೆ ಯಾವ ಶಿಕ್ಷಣ ಸಂಸ್ಥೆಯನ್ನು ಆರಂಭಿಸಬಾರದೆಂಬ ಸರ್ಕಾರಿ ಆಜ್ಞೆ ಇತ್ತು (ರಮಾನಂದ ತೀರ್ಥ, ೬೯). "ನಿಜಾಮನ ವ್ಯಕ್ತಿತ್ವದ ಸುತ್ತಲೂ ಮುಸ್ಲಿಂ ಜಾತೀಯ ಶ್ರೇಷ್ಠತೆಯನ್ನು ರೂಪಿಸಲಾಗಿತ್ತು. ಮುಸಲ್ಮಾನನಾಗಿರುವುದು ಪ್ರತಿಷ್ಠೆಯ ವಿಷಯ. ಮುಸಲ್ಮಾನೇತರನೆಂದರೆ

ಏನೋ ಒಂದು ಕೀಳುಸ್ಥಿತಿ. ಮುಸಲ್ಮಾನನೆಂದರೆ ಸ್ವಾಮಿ, ಹಿಂದುವೆಂದರೆ ಗುಲಾಮ ಸಾಮಾಜಿಕ ಜೀವನವೂ ಇದೇ ಭಾವನೆಯಿಂದ ಕಲುಷಿತವಾಗಿತ್ತು. ಹಿಂದುಗಳನ್ನು ಸರ್ವತೋಮುಖವಾಗಿ ಹತ್ತಿಕ್ಕುತ್ತಿದ್ದುದು ಸ್ಪಷ್ಟವಾಗಿತ್ತು. ಆರಂಭದ ಹಂತಗಳನ್ನು ಬಿಟ್ಟರೆ ಎಲ್ಲಾ ಮಟ್ಟದಲ್ಲೂ ಉರ್ದು ಶಿಕ್ಷಣ ಮಾಧ್ಯಮವಾಗಿತ್ತು. ಶೈಕ್ಷಣಿಕ ಕ್ಷೇತ್ರದಲ್ಲಿ ಖಾಸಗಿ ಯತ್ನಗಳನ್ನು ಪೂರ್ತಿ ನಿಷೇಧಿಸಲಾಗಿತ್ತು... ಸಾಮಾಜಿಕ, ಸಾಂಸ್ಕೃತಿಕ ಅಥವಾ ಇನ್ನಾವುದೇ ಚಟುವಟಿಕೆಗಳನ್ನು ನಡೆಸಲು ಅನುಮತಿ ಪಡೆಯಬೇಕಾಗಿತ್ತು" ಎಂದು ರಮಾನಂದ ತೀರ್ಥರು ತಮ್ಮ ಆತ್ಮಕಥೆಯಲ್ಲಿ ದಾಖಲಿಸಿದ್ದಾರೆ (ರಮಾನಂದ ತೀರ್ಥ, ೭೩). ಮುಸ್ಲಿಂ ವಿದ್ಯಾರ್ಥಿಗಳ ಜೊತೆಗೆ ಹಿಂದೂ ವಿದ್ಯಾರ್ಥಿಗಳೂ ಕೂಡ ಶೇರವಾನಿ, ಪಾಯಜಾಮ ತೊಟ್ಟು ಫೆಜ್ ಕ್ಯಾಪ್ ಧರಿಸಬೇಕಾಗಿತ್ತು. ಮುಸ್ಲಿಮರಂತೆ ಫರ್ಸಿ ಸಲಾಮ (ನೆಲದ ಫರ್ಸಿಯನ್ನು ಮುಟ್ಟಿ ಮಾಡುವ ನಮಸ್ಕಾರ) ಮಾಡಬೇಕಾಗುತ್ತಿತ್ತು (ಜಯಶೆಟ್ಟಿ, ೧೪).

ರಜಾಕಾರ ಸಂಘಟನೆಯು ಆರಂಭವಾಗುವ ಮೊದಲು 'ಖಾಕಸಾರ ಪಾರ್ಟಿ' ಎಂಬುದಿತ್ತು. ಇದನ್ನು 'ನಿಜಾಮ ಸೇನೆ' ಎನ್ನುತ್ತಿದ್ದರು. ಈ ಸಂಘಟನೆಯ ಉದ್ದೇಶವೆಂದರೆ ನಿಜಾಮ ರಾಜ್ಯದಲ್ಲಿ ಶುದ್ಧೀಕರಣ ಮಾಡುವುದು. ಇಸ್ಲಾಮನ್ನು ನಂಬದವರೆಲ್ಲ 'ನಾಪಾಕ್'ರೆಂದು ಮುಸ್ಲಿಮರು ಭಾವಿಸುತ್ತಾರೆ. ನಾಪಾಕರನ್ನು 'ಕಾಫಿರ್'ರೆಂದು ಕರೆಯುತ್ತಾರೆ. ನಿಜಾಮ ರಾಜ್ಯದಲ್ಲಿ ಯಾರೊಬ್ಬನೂ ಕಾಫಿರನಾಗಿ ಉಳಿಯಕೂಡದು ಎಂಬುದು 'ಖಾಕಸಾರ ಪಾರ್ಟಿ'ಯ ಮೂಲ ಉದ್ದೇಶವಾಗಿತ್ತು (ಜಯಶೆಟ್ಟಿ, ೧೬).

ಇದೇ ರೀತಿಯ ಮತ್ತೊಂದು ಸಂಘಟನೆ ಎಂದರೆ 'ಇತ್ತೇಹಾದ್' (ಅಂಜುಮಾನ್-ಏ-ಇತ್ತೇಹಾದ್-ಉಲ್-ಮುಸಲ್ಮೀನ್) ಎಂಬ ಸಂಘಟನೆ. ಇದು ಮೊದಲು ನಿಜಾಮನ ವಿರುದ್ಧವಾಗಿಯೇ ಬಂಡೆದ್ದು ಮತೀಯ ಚಳವಳಿಗೆ ನಾಂದಿಹಾಡಿತ್ತು. ಒಂದು ಹಂತದಲ್ಲಿ ತಾನೇ ನಿಜಾಮನೆಂದು ಭಾವಿಸಿಕೊಂಡಿತ್ತು. ಮುಂದೆ ನಿಜಾಮನ ವಿಶ್ವಾಸಗಳಿಸಿಕೊಂಡು ಅವನ ಕೃಪೆಯಿಂದಲೇ ತನ್ನ ದುಷ್ಕೃತ್ಯವನ್ನು ಮುಂದುವರೆಸಿತು. ಈ ಸಂಘಟನೆಯು ಹಿಂದೂಗಳ ಮೇಲೆ ನಡೆಸುವ ಕ್ರೂರವಾದ ಅತ್ಯಾಚಾರಗಳು ಸರ್ಕಾರಿ ಅಧಿಕಾರಿಗಳ ಗಮನಕ್ಕೆ ತಂದರೂ, ದಿವ್ಯನಿರ್ಲಕ್ಷ ತೋರುತ್ತಿದ್ದರು (ಜಯಶೆಟ್ಟಿ, ೨೧). ಈ ಸಂಘಟನೆಯನ್ನು ಮಹಮ್ಮದ ನವಾಜ ಖಾಜ್ ಎಂಬುವನು ೧೯೨೬ರಲ್ಲಿ ಸ್ಥಾಪಿಸಿದನು (ಮಹಾಬಲೇಶ್ವರಪ್ಪ, ೬೬). ಇದರ ಕಾರ್ಯಚಟುವಟಿಕೆಯನ್ನು ವಿಸ್ತರಿಸುವ ಸಲುವಾಗಿ ಸ್ವತಃ ನಿಜಾಮನೇ 'ಬಹದ್ದೂರ್ ಖಾನ' ಎಂಬ ಪಠಾಣ ಯುವಕನನ್ನು ಇತ್ತೇಹಾದ ಸಂಘಟನೆಗೆ ಅಧ್ಯಕ್ಷನನ್ನಾಗಿ ಮಾಡಿದನು. ಬಹದ್ದೂರ ಖಾನನ ಕಾರ್ಯಚಟುವಟಿಕೆಯನ್ನು ಮೆಚ್ಚಿ ನಿಜಾಮನು ಆತನಿಗೆ 'ಬಹದ್ದೂರ ಯಾ ಜಂಗ್' ಎಂಬ ಬಿರುದು ಕೊಟ್ಟು ಗೌರವಿಸಿದನು (ಜಯಶೆಟ್ಟಿ, ೨೨). ಹೀಗೆ ಅನಿರೀಕ್ಷಿತವಾಗಿ ನಿಜಾಮನು ಹೈದರಾಬಾದ್ ಸಂಸ್ಥಾನದಲ್ಲಿ ಧರ್ಮವಿರೋಧಿ ಚಟುವಟಿಕೆಗಳಿಗೆ ಪ್ರಚೋದನೆ ನೀಡುತ್ತಾ, ಪೋಷಿಸುತ್ತಾ ಬಂದನು. ಒಟ್ಟಾರೆ, ನಿಜಾಮ ಉಸ್ಮಾನ್ ಅಲಿಖಾನನು ಪರಿಸ್ಥಿತಿಯ ಕೈಗೊಂಬೆಯಾಗಿಹೋಗಿದ್ದು ಮುಂದಿನ ಎಲ್ಲ ದುರಂತಗಳಿಗೂ ಕಾರಣವಾಯಿತು.

ಇತ್ತೇಹಾದ ಸಂಘಟನೆಯ ಅಡಿಯಲ್ಲಿ 'ರಜಾಕಾರ' ಎಂಬ ಪಡೆಯನ್ನು ಕಾಸಿಂ ರಜ್ವಿಯು ಸಂಘಟಿಸಿದನು. ರಜಾಕಾರ ಎಂದರೆ 'ದೇವರ ಸೇವೆಗೆ ಮೀಸಲಾದ ಸ್ವಯಂ ಸೇವಕರು' ಎಂದರ್ಥ. ಕಾಸಿಂ ರಜ್ವಿಯು ಅಲಿಘಡ್ ಮುಸ್ಲಿಂ ವಿಶ್ವವಿದ್ಯಾಲಯದಿಂದ

ಕಾನೂನು ಪದವಿಪಡೆದು, ಮಹಾರಾಷ್ಟ್ರದ ಲಾತೂರಿನಲ್ಲಿ ವಕೀಲಿವೃತ್ತಿ ನಡೆಸುತ್ತಿದ್ದನು. ೧೯೪೬ರಲ್ಲಿ ರಜ್ವಿ ಇತ್ತೆಹಾದ್‌ನ ಮುಖ್ಯಸ್ಥನೂ ಆದನು. ಇವನು ಸಂಸ್ಥಾನದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಯನ್ನು ದಮನ ಮಾಡಲು ಹೊರಟನು. ನಿಜಾಮನ ಅಧಿಕಾರವನ್ನು ಮೊಟಕುಗೊಳಿಸಿ ಸರ್ಕಾರದ ಸರ್ವಾಧಿಕಾರಿಯಾಗಿ ಕೆಲಸ ನಿರ್ವಹಿಸತೊಡಗಿದನು. ಭಾರತದ ವಿಲೀನ ವಿರೋಧಿಸಿ 'ಅಜಾದ್ ಹೈದ್ರಾಬಾದ್' ನಿರ್ಮಾಣಕ್ಕೆ ಮುಂದಾದನು. ಸಂಸ್ಥಾನದ ೫೨ ಸ್ಥಳಗಳಲ್ಲಿ ರಜಾಕಾರರಿಂದ ಕೂಡಿದ ಸಶಸ್ತ್ರ ಪಡೆಗಳನ್ನು ಸ್ಥಾಪಿಸಿದನು. ೧೯೪೮ರ ಜನವರಿಯಲ್ಲಿ ೩೦,೦೦೦ವಿದ್ದ ರಜಾಕಾರರ ಸಂಖ್ಯೆಯು ಜುಲೈ ವೇಳೆಗೆ ೧,೦೦,೦೦೦ ಸಂಖ್ಯೆ ಮುಟ್ಟಿತು. ನಿಜಾಮನ ರೇಡಿಯೋ ಸೇವೆ ರಜ್ವಿಯ ವಶವಾಯಿತು. ರಜಾಕಾರರ ನೆರವಿನಿಂದ ರಜ್ವಿ ನಡೆಸಿದ ಪುಂಡಾಟಿಕೆ ಅಷ್ಟಿಷ್ಟಲ್ಲ (ಮಹಾಬಲೇಶ್ವರಪ್ಪ, ೬೬–೬೭).

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ರಜಾಕಾರರ ಹಾವಳಿಗೆ ತುತ್ತಾದ ಗ್ರಾಮಗಳು ೩೨೫. ಅವುಗಳಿಂದ ೫.೬ಕೋಟಿ ಹಣ, ೬೨ಲಕ್ಷ ಬೆಲೆಬಾಳುವ ವಸ್ತುಗಳನ್ನು ರಜಾಕಾರರು ದೋಚಿದರು. ೧೮೭ ಜನರ ಹತ್ಯೆ, ೧೧೨ ಅತ್ಯಾಚಾರಗಳನ್ನು ನಡೆಸಿದರು (ಮಹಾಬಲೇಶ್ವರಪ್ಪ, ೬೮). ೧೯೩೭ರ ಡಿಸೆಂಬರ್‌ನಿಂದ ಸೆಪ್ಟಂಬರ್, ೧೯೪೦ರ ನಡುವಿನ ಅವಧಿಯಲ್ಲಿ ಗುಲ್ಬರ್ಗ, ಬೀದರ್ ಸೇರಿದಂತೆ ಸಂಸ್ಥಾನದ ಎಂಟು ಕಡೆಗಳಲ್ಲಿ ಭಾರಿ ಕೋಮು ಗಲಭೆಗಳು ನಡೆದವು (Modern Asian studies 22, 4(1988) Pp:784).

"ಹಳ್ಳಿಗಳಲ್ಲಿ ಉಡಾಳರಾಗಿ ತಿರುಗಾಡುತ್ತಿದ್ದ ತರುಣರೆಲ್ಲ 'ಖಾಕಿ' ಸಮವಸ್ತ್ರಧರಿಸಿ, ಲಾಟಿಯನ್ನೋ, ಬಂದೂಕನ್ನೋ ಹಿಡಿದುಕೊಂಡು ಓಡಾಡುವ ರೀತಿಯನ್ನು ನೋಡಬೇಕಾಗಿತ್ತು... ಗೌಡ–ಊರ ಹಿರಿಯರನ್ನು ಕಂಡು, ದೂರದಲ್ಲಿ ನಿಂತು, ವಿನಯದಿಂದ ಮಾತಾಡುತ್ತಿದ್ದ ತೀರ ಸಾಮಾನ್ಯ ಮುಸಲ್ಮಾನನು, ತಾನು 'ರಜಾಕಾರ'ನೆಂದು ಭಾವಿಸಿ, 'ಖಾಕಿ' ಸಮವಸ್ತ್ರಧರಿಸಿ, ಗೌಡರು, ಊರಹಿರಿಯರು ಕುಳಿತುಕೊಳ್ಳುತ್ತಿದ್ದ ಕಟ್ಟೆಯ ಮೇಲೆ ಕುಳಿತು ಕಾಸಿಂ ರಜ್ವಿಯ ಗುಣಗಾನ ಮಾಡುತ್ತಿದ್ದನು" ಎಂದು ಚನ್ನಬಸಪ್ಪ ಬೆಟ್ಟದೂರ ಅವರು ತಮ್ಮ ಆತ್ಮಕಥೆಯಲ್ಲಿ ದಾಖಲಿಸಿದ್ದಾರೆ (ಚೆನ್ನಬಸಪ್ಪ, ೭೧). ರಾಯಚೂರು ಪಟ್ಟಣದಲ್ಲಿ ನಿಜಾಮರ ಕಾಲದಲ್ಲಿ ಯಾರೇ ಆಗಲಿ, ತಮ್ಮ ಮನೆಯ ಮೇಲೆ ಏರಬೇಕಾದರೆ "ತಖಿಲಿಯ ಹೋ ಜಾವ್" (ಯಾರಾದರೂ ಹೊರಗೆ ಇದ್ದರೆ, ಒಳಗೆ ಹೋಗಿರಿ) ಎಂದು ಕೂಗಬೇಕಿತ್ತು. ಮುಸಲ್ಮಾನರಿಲ್ಲದ ಓಣಿಯಲ್ಲಿರುವ ಮನೆಯ ಯಜಮಾನ ಒಮ್ಮೆ ಹಾಗೆ ಕೂಗದೆ ಮಾಳಿಗೆ ಯೇರಿದುದೇ ಆಚೆ ಓಣಿಯ ಮುಸಲ್ಮಾನನಿಗೆ ದೊಡ್ಡ ತಪ್ಪಾಯಿತು. ಕೂಡಲೆ "ನೀಚೆ ಉತ್ರೋ ಹರಾಮ ಜಾದೇ" (ಕೆಳಗಿಳಿ ಮಿಂಡರಿಗೆ ಹುಟ್ಟಿದವನೆ) ಎಂದು ಕೂಗಿದ. ಕೆಳಗಿಳಿದು ಬಂದ ಯಜಮಾನನಿಗೆ ಆಚೆ ಓಣಿಯ ಮುಸಲ್ಮಾನನು ಚಪ್ಪಲಿ ಹಿಡಿದು ಚೆನ್ನಾಗಿ ಬಡಿದು ಸಾಕಾಗಿ "ಇಸ್ ಮರ್ತಬಾ ತುಮಾರಾ ಜಾನ್ ಛೋಡ ದಿಯಾ ಹೂಂ! ಜಾವ್" (ಈ ಸಾರೆ ನಿನ್ನ ಜೀವ ಉಳಿಸಿದ್ದೇನೆ, ನಡೆ) ಎಂದು ಕ್ಷಮಿಸಿದ ಪ್ರಸಂಗವನ್ನು ಚೆನ್ನಬಸಪ್ಪ ಬೆಟ್ಟದೂರು ಅವರು ತಮ್ಮ ಆತ್ಮಕಥೆಯಲ್ಲಿ ದಾಖಲಿಸಿದ್ದಾರೆ (ಚೆನ್ನಬಸಪ್ಪ, ೬೯). ಎಲ್ಲರು ಮೌನವಾಗಿ ಈ ಘಟನೆಯನ್ನು ನೋಡಿ ಯಜಮಾನನಿಗೆ 'ಕೂಗಿ ಏರಿದ್ದರೆ ಆಗಿಹೋಗಿತ್ತು' ಎಂದರೆ ವಿನಃ ಧೈರ್ಯದ ಮಾತು ಹೇಳದೆ ಹೋದರು. ಮುಸಲ್ಮಾನ ಹುಡುಗರು ದಾರಿಯಲ್ಲಿ ಹೋಗುವವರಿಗೆ ದಂಡಿನಿಂದ ಕುಂಡಿಯ ಮೇಲೆ ತಿವಿದು "ಕ್ಯಾ ಜಾರಹೇ ಹೈಂ, ದೇಖೋ, ಪಾಕೆ ಲೌಡೆ ಧೋತಿ

ಪೆಹನ್ ಕೆ" (ಹೇಗೆ ಹೋಗುತ್ತಾರೆ, ನೋಡ್ರಿ, ತಾಯಿಗ್ಗಂಡರು, ಪಂಚೆಯುಟ್ಟುಕೊಂಡು) ಎಂದು ಗೇಲಿ ಮಾಡುತ್ತಿದ್ದರು. ಜನರು ಮರುಮಾತನಾಡದೆ ತಲೆತಗ್ಗಿಸಿಕೊಂಡು ಹೋಗುತ್ತಿದ್ದರು (ಅದೇ). ಇದು ರಜಾಕಾರರ ಪಿತ್ತ ನೆತ್ತಿಗೇರಿಸಿಕೊಂಡ ಕೆಲವು ಪುಂಡ ಮುಸ್ಲಿಮರ ನಡವಳಿಕೆಯಾಗಿತ್ತೇ ವಿನಃ ಎಲ್ಲ ಮುಸ್ಲಿಮರು ಹಾಗೆ ವರ್ತಿಸುತ್ತಿದ್ದರೆಂಬುದು ತಪ್ಪು. ಏಕೆಂದರೆ ಅದೇ ಚನ್ನಬಸಪ್ಪ ಅವರು ಒಂದು ಕಡೆ ದಾಖಲಿಸುತ್ತಾರೆ-"...ಮಾನ್ವಿ ತಾಲೂಕಿನಲ್ಲಿ ನಿಜಾಮ ರಾಜ್ಯದ ಬೇರೆ ಕಡೆಯಲ್ಲಿ ನಡೆದ ದೌರ್ಜನ್ಯ, ಮಾನಾಪಹರಣ, ಕೊಲೆ-ಸುಲಿಗೆಯಂಥ ಪ್ರಕರಣಗಳು ನಡೆದಿಲ್ಲವೆಂದೇ ಹೇಳಬೇಕು. ಏಕೆಂದರೆ ಮಾನ್ವಿಯ ಹಿರಿಯರಾದ ಮದಾರ ಸಾಹೇಬ ಮತ್ತು ಸೈಯ್ಯದ್ ಹುಸೇನ್ ಸಾಹೇಬರ ಕಾರಣದಿಂದ ಮಾತ್ರ. ಅವರುಗಳು: 'ಎಲೆ ಹುಡುಗರಿರಾ, ಇನ್ನೂ ನಿಮ್ಮ ತಲೆಯ ಮೇಲಿನ ಮಾಸ ಆರಿಲ್ಲ. ಕಾಲ ಹೀಗೆ ಇರುವುದಿಲ್ಲ. ನಿಮಗೊಂದು ಕಾಲ ಬಂದರೂ ಅವರಿಗೂ ನಿಮ್ಮಂತಹ ಕಾಲ ಬಂದೇ ಬರುವುದು ತಳಕೊಳ್ಳಿರಿ, ಹುಚ್ಚುಚ್ಚು ವ್ಯಾಪಾರ ಮಾಡುವುದನ್ನು ಬಿಡಿರಿ' ಎಂದು ತರುಣರಿಗೆ ಹೇಳುತ್ತಿದ್ದ ಹಿತವಚನ ಪರಿಣಾಮ ಮಾಡಿರಬೇಕು" ಎಂದಿದ್ದಾರೆ (ಚೆನ್ನಬಸಪ್ಪ, ೭೧). ಇದರಿಂದ ಎಲ್ಲಾ ಮುಸಲ್ಮಾನರ ಮನೋಗತವು ಹಿಂದೂ ವಿರೋಧಿಯಾಗಿರಲಿಲ್ಲ, ರಜಾಕಾರ ಎಂಬುದು ಪುಂಡು ಹುಡುಗರ ಗುಂಪಾಗಿತ್ತು. ಹಿರಿಯ ಮುಸ್ಲಿಮರೂ ಹಿಂದೂಗಳ ಬಗೆಗೆ ಕಳಕಳಿ ಹೊಂದಿದ್ದರೆಂಬುದನ್ನು ಅರಿಯಬೇಕು.

ಧಾರ್ಮಿಕ ವಿಚಾರದಲ್ಲಿ ಕೊನೆಯ ನಿಜಾಮ ಉಸ್ಮಾನ್ ಅಲಿಖಾನನ ದೋರಣೆ ನಕಾರಾತ್ಮಕವಾಗಿತ್ತು. ಏಕೆಂದರೆ ೧೯೩೦ರ ದಶಕದ ವೇಳೆಗೆ ಭಾರತದ ಸ್ವಾತಂತ್ರ ಚಳವಳಿಯೇ ಕೋಮುಭಾವನೆಯಿಂದ ಕಲುಷಿತಗೊಂಡು ಮುಸ್ಲಿಂ ಲೀಗ್ ಹೆಚ್ಚು ಪ್ರಾಮುಖ್ಯತೆಗೆ ಬರುತ್ತಿದ್ದು, ಕೋಮುಸೌಹಾರ್ದತೆ ಎಂಬುದು ಕದಡಿದ ತಿಳಿನೀರ ಕೊಳವಾಗಿತ್ತು. ಅದೇ ವೇಳೆ ಹೈದರಾಬಾದ್ ಸಂಸ್ಥಾನದಲ್ಲಿ ತೀವ್ರಗೊಳ್ಳುತ್ತಿದ್ದ ಸ್ವಾತಂತ್ರ್ಯ ಚಳವಳಿಯನ್ನು ದಮನ ಮಾಡುವ ಕೆಲಸವನ್ನು ಬ್ರಿಟಿಷರ ಕಾರಣದಿಂದ ಮಾಡಬೇಕಾಗಿರುತ್ತದೆ. ಏಕೆಂದರೆ ನಿಜಾಮ ಬ್ರಿಟಿಷರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ. ಆದ್ದರಿಂದ ಬ್ರಿಟಿಷರ ಹಿತಾಸಕ್ತಿಯಲ್ಲಿ ನಿಜಾಮನ ರಾಜಕೀಯ ಹಿತಾಸಕ್ತಿಯೂ ಅಡಗಿತ್ತು ಎಂಬುದನ್ನು ಮರೆಯುವಂತಿಲ್ಲ. ಆದ್ದರಿಂದ ಹಿಂದೂಗಳ ನೆತ್ತರ ಮೇಲೆ ಮುಸ್ಲಿಂ ಸಾಮ್ರಾಜ್ಯ ನಿರ್ಮಿಸಲು ಬೇಕಾದ ನೀತಿಗಳನ್ನು ನಿಜಾಮ ಮತ್ತು ಅವನ ಇತ್ತೇಹಾದ್ ರೂಪಿಸುತ್ತಿದ್ದವು. ಹಿಂದೂಗಳಿಗೆ ಧಾರ್ಮಿಕ ಸ್ವಾತಂತ್ರವಿರಲಿಲ್ಲ. ಅವರಿಗೆ ದೇವಾಲಯ ನಿರ್ಮಿಸಿಕೊಳ್ಳಲು ಅವಕಾಶವಿರಲಿಲ್ಲ. ಶ್ರಾವಣ ಮಾಸದಲ್ಲಿ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಲು ಅನುಮತಿ ಇರಲಿಲ್ಲ. ಧಾರ್ಮಿಕ ಆಚರಣೆಗಳಿಗೆ ಪ್ರೋತ್ಸಾಹವಿರಲಿಲ್ಲ. ಗಣೇಶ ಉತ್ಸವ, ಬಸವಜಯಂತಿಗಳ ಸಂದರ್ಭಗಳಲ್ಲಿ ಹಿಂದೂಗಳು ಮೆರವಣಿಗೆ ನಡೆಸುತ್ತಿರಲಿಲ್ಲ. ಗುಲ್ಬರ್ಗಾದ ಶ್ರೀಶರಣಬಸವೇಶ್ವರ ದೇವಾಲಯದ ಗೋಪುರದ ಕಳಸ ಸ್ಥಾಪಿಸಲು ಅನುಮತಿ ನೀಡಲಿಲ್ಲ.

ಇವನ್ನು ಗಮನಿಸಿದರೆ ಎರಡು ಅಂಶ ಸ್ಪಷ್ಟ. ಪ್ರಭುತ್ವ ಯಾವಾಗಲೂ ಜನ ಸಂಘಟಿತರಾಗುವುದನ್ನು ಬಯಸುವುದಿಲ್ಲ. ಇನ್ನೊಂದು ಬಹುಸಂಖ್ಯಾತರನ್ನು ಆಳಲು ನಿಜಾಮನಿಗೆ ಇದ್ದುದು ರಾಜಕೀಯ ಅಸ್ತಿತ್ವದ ಆತಂಕ. ಈ ಕಾರಣದಿಂದ ನಿಜಾಮ ಬಹುಸಂಖ್ಯಾತರು ಧಾರ್ಮಿಕವಾಗಿ ಸಂಘಟಿತರಾಗುವುದಕ್ಕೆ ಮತ್ತು ರಾಜಕೀಯ ಸಭೆ ಸಮಾರಂಭ ನಡೆಸುವುದಕ್ಕೆ ವಿರೋಧವಾಗಿದ್ದ. ಆದರೆ ಎಂದೂ ಶೈಕ್ಷಣಿಕ ಸಮ್ಮೇಳನಗಳನ್ನು, ಸಾಹಿತ್ಯ ಸಮ್ಮೇಳನಗಳನ್ನು ನಡೆಸುವುದಕ್ಕೆ ವಿರೋಧವಾಗಿರಲಿಲ್ಲ. ಆದ್ದರಿಂದ ಅಂದಿನ

ಹೋರಾಟಗಾರರು ಶೈಕ್ಷಣಿಕ ಸಮ್ಮೇಳನಗಳೆಂದು ಹೇಳಿಕೊಂಡು ಅನುಮತಿ ಪಡೆದು ರಾಜಕೀಯ ಭಾಷಣಗಳಿಗೆ ವೇದಿಕೆಗಳನ್ನು ಬಳಸಿಕೊಳ್ಳುತ್ತಿದ್ದರು (ರಮಾನಂದ ತೀರ್ಥ, ೭೫-೭೬).

ಅಂತಿಮವಾಗಿ ರಮಾನಂದ ತೀರ್ಥರ ಒಂದು ಮಾತಿನಿಂದಲೇ ಈ ಪ್ರಬಂಧವನ್ನು ಮುಕ್ತಾಯಗೊಳಿಸಬಹುದಾಗಿದೆ. ಅದೇನೆಂದರೆ: "ಸುದೈವದಿಂದ ಹೈದರಾಬಾದಿನ ವಿಚಾರವಂತ ಜನರಿಗೆ ಒಂದು ಸಂಗತಿ ಸುಸ್ಪಷ್ಟವಾಗಿತ್ತು; ಹೈದರಾಬಾದಿನ ಜನರ ಸಮಸ್ಯೆ ಮೂಲತಃ ಹಿಂದೂ ಮುಸ್ಲಿಂ ಸಮಸ್ಯೆಯಲ್ಲ. ಬದಲಿಗೆ ಪಾಳೇಗಾರಿ ನಿರಂಕುಶ ವೃತ್ತಿ ಹಾಗೂ ಬ್ರಿಟಿಷ್ ಸಾಮ್ರಾಜ್ಯಶಾಹಿ - ಹೀಗೆ ದ್ವಿಮುಖ ಹೋರಾಟದ ಸಮಸ್ಯೆಯಾಗಿತ್ತು".

......................

**ಕೃತಜ್ಞತೆಗಳು:** ಈ ಪ್ರಬಂಧವನ್ನು ರಚಿಸಲು ಕೆಲವು ಆಕರಗಳನ್ನು ಹೊದಗಿಸಿಕೊಟ್ಟ ಸನ್ಮಾನ್ಯ ಡಾ.ಎಸ್.ಕೆ.ಅರುಣಿ ಅವರಿಗೆ ಕೃತಜ್ಞತೆಗಳು.

## ಪರಾಮರ್ಶನ ಗ್ರಂಥಗಳು

**ಕನ್ನಡ**

೧. ರಮಾನಂದ ತೀರ್ಥ, ಸ್ವಾಮಿ (ಅನು:ಸೂರ್ಯನಾಥ ಕಾಮತ್)- (೧೯೭೭) ಹೋರಾಟದ ನೆನಪುಗಳು, ಗೀತಾ ಬುಕ್ ಹೌಸ್, ಮೈಸೂರು.

೨. ಚೆನ್ನಬಸಪ್ಪ ಬೆಟ್ಟದೂರು- (೨೦೦೯) ನನ್ನ ಜೀವನಾನುಭವಗಳು, ಬಸವತತ್ವ ಪ್ರಸಾರ ಸಂಸ್ಥೆ, ಧಾರವಾಡ.

೩. ಮಹಾಬಲೇಶ್ವರಪ್ಪ ಬಿ.ಸಿ- ೨೦೦೮, ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ.

೪. ಜಯಶೆಟ್ಟಿ, ಭಾಲಚಂದ್ರ- (೨೦೦೬) ಹೈದರಾಬಾದ್ ಕರ್ನಾಟಕದ ವಿಮೋಚನಾ ಚಳವಳಿ, ಕ.ಸಾ.ಪ, ಬೆಂಗಳೂರು.

೫. ರಹಮತ್ ತರೀಕೆರೆ- ೨೦೦೮, ಕರ್ನಾಟಕದ ಸೂಫಿಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೬. ಗುರುಲಿಂಗಪ್ಪ ಧಬಾಲೆ- (೨೦೦೬) ಬೀದರ್ ಜಿಲ್ಲೆಯ ತತ್ವಪದಕಾರರು, ಕ.ಸಾ.ಪ, ಬೆಂಗಳೂರು.

೭. ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್- (೧೯೯೭) (ಮುಖ್ಯ ಸಂಪಾದಕರು: ಎಂ.ಬಿ.ಪಾಟೀಲ)

೮. ಜಾಗಿರದಾರ ಆರ್.ಜಿ., ಲಿಂಗಸುಗೂರು ವಿಠ್ಠಲರಾವ್- (೧೯೪೧) ಹೈದರಾಬಾದ್ ಕರ್ನಾಟಕ, ಕರ್ನಾಟಕ ಜನರಲ್ ಸ್ಟೋರ್ಸ್, ಹೈದರಾಬಾದ್.

**ಇಂಗ್ಲಿಷ್**

1. John Law- (1914) *Modern Hyderabad (Deccan)*, Thacker, Spink &Co., Calcutta.
2. Ian Copland- (1988) 'Communalism in Princely India: The Case of Hyderabad, 1930-1940' – *Modern Asian Studies 22, 4*. Pp.783-814.
3. Saidul Haqimadi- (1978) *Nawab Imad-ul-Mulk*, The state achieves Govt. of A.P.
4. *Provincial Series Hyderabad state- Gulbarga* (2011), Karnataka Gazetteer Dept. Bangalore.

■

# ಮಿತ್ರ ಅ.ಲ. ನರಸಿಂಹನ್ –ಒಂದು ನೆನಪು

–ದೇವರಕೊಂಡಾರೆಡ್ಡಿ

೧೯೭೫–೭೬ರ ಸುಮಾರಿಗೆ ಶಾಸನಶಾಸ್ತ್ರ ತರಗತಿಗೆ ಸುಮಾರು ೩೫ ಜನರು ಸೇರಿದ್ದರು. ಮುಂದೆ ಈ ಸಂಖ್ಯೆ ಇಳಿಯುತ್ತಾ ಬಂದು ೨೦ ಜನರಿಗೆ ನಿಂತಿತು. ಹೀಗೆ ಉಳಿದವರಲ್ಲಿ ನರಸಿಂಹನ್ ಅವರೂ ಒಬ್ಬರು. ನರಸಿಂಹನ್ ಈ ಕಾಲಕ್ಕೆ ಕರ್ನಾಟಕ ಗ್ಯಾಜೆಟಿಯರ್ ಇಲಾಖೆಗೆ ಬಂದಿದ್ದರು. ಪರಿಷತ್ತಿನ ಶಾಸನಶಾಸ್ತ್ರ ತರಗತಿಗಳಿಗೆ ಸೇರಿ ಶಾಸನದ ಬಗ್ಗೆ ಮಾಹಿತಿ ಪಡೆಯಿರಿ ಎಂದು ಅವರ ವಿಭಾಗದ ಮುಖ್ಯಸ್ಥರಾಗಿದ್ದ ಶ್ರೀ ಅಭಿಶಂಕರ್ ಅವರು ತಮ್ಮ ಇಲಾಖೆಯ ಸಂಪಾದಕರಿಗೆ ಹಾಗೂ ಅನ್ವೇಷಕರಿಗೆ ತಿಳಿಸಿದ್ದರಂತೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಪರಿಷತ್ತಿನಲ್ಲಿ ನಡೆಯುತ್ತಿದ್ದ ಶಾಸನಶಾಸ್ತ್ರ ತರಗತಿಗೆ ಶ್ರೀಯುತ ಲಕ್ಷ್ಮೀ ನರಸಿಂಹನ್ ಅವರು ಬಂದು ಸೇರಿದರು. ನರಸಿಂಹನ್ ತರಗತಿಗೆ ಸೇರಿದಾಗ ವಯಸ್ಸಿನಲ್ಲಿ ನನಗಿಂತ ಹಿರಿಯರಾಗಿದ್ದರು. ಇದೇ ರೀತಿ ಹೆಚ್ಚಿನ ವಯೋಮಿತಿಯುಳ್ಳ ಅನೇಕರು ತರಗತಿಯಲ್ಲಿದ್ದರು. ಇವರ ಜೊತೆಯಲ್ಲಿಯೇ ಇವರ ಭಾವಿಪತ್ನಿ ಮಂಜುಳ ಅವರೂ ತರಗತಿಗಳಿಗೆ ಬರುತ್ತಿದ್ದರು. ಇಬ್ಬರೂ ಎಂ.ಇ.ಎಸ್ ಕಾಲೇಜಿನವರಾಗಿದ್ದರಿಂದ ಮತ್ತು ಮಲ್ಲೇಶ್ವರದವರಾದ್ದರಿಂದ ಒಟ್ಟಿಗೆ ತರಗತಿಗೆ ಬಂದು ಹೋಗುತ್ತಿದ್ದರು. ತರಗತಿಯಲ್ಲಿದ್ದಾಗ ಎಲ್ಲರಂತೆ ಇವರೂ ಪರಿಚಯವಾಗಿದ್ದರು. ಶಾಸನಶಾಸ್ತ್ರ ತರಗತಿಯ ಜೊತೆಗೆ ಕಲಾವಿದ ಹಡಪದ್ ಅವರು ನಡೆಸುತ್ತಿದ್ದ ಕೆನ್ ಕಲಾಶಾಲೆಯಲ್ಲಿ ನರಸಿಂಹನ್ ಅಧ್ಯಯನ ಮಾಡುತ್ತಿದ್ದ ಸಂಗತಿ ತಿಳಿದಿತ್ತು. ಮುಂದೆ ಶೇಷಶಾಸ್ತ್ರಿಯವರ ಕರ್ನಾಟಕದ ವೀರಗಲ್ಲುಗಳು ಎಂಬ ಪುಸ್ತಕ ಪ್ರಕಟವಾಯಿತು. ಇದಕ್ಕೆ ಬಳಸಿದ ಛಾಯಾಚಿತ್ರಗಳನ್ನು



ಕೆನ್ ಕಲಾಶಾಲೆಯ ವಿದ್ಯಾರ್ಥಿಗಳಿಗೆ ತೋರಿಸಿ, ಶೇಷಶಾಸ್ತ್ರಿಯವರಿಂದ ಉಪನ್ಯಾಸ ಕೊಡಿಸಿ ಇವುಗಳನ್ನು ಕುರಿತು ವರ್ಣ ಮತ್ತು ರೇಖಾ ಚಿತ್ರಗಳನ್ನು ಬರೆಯುವಂತೆ ಕೆನ್ ಕಲಾಶಾಲೆಯ ವಿದ್ಯಾರ್ಥಿಗಳನ್ನು ಹುರಿದುಂಬಿಸಿ ವೀರಗಲ್ಲುಗಳನ್ನು ಕುರಿತಂತೆ ಒಂದು ಚಿತ್ರಕಲಾ ಪ್ರದರ್ಶನವನ್ನು ಪರಿಷತ್ತಿನಲ್ಲಿ ನಡೆಸಿದ್ದರು. ಹೀಗೆ ಪರಿಚಯವಾದ ನರಸಿಂಹನ್ ಮತ್ತು ನಮ್ಮ ಸ್ನೇಹ ಅಂತ್ಯದವರೆವಿಗೂ ಹಾಗೆಯೇ ಇತ್ತು. ಮುಂದೆ ೧೯೮೧ರ ಸುಮಾರಿಗೆ ಗ್ಯಾಜೆಟಿಯರ್ ಇಲಾಖೆಗೆ ಡಾ.ಸೂರ್ಯನಾಥ ಕಾಮತರು ಮುಖ್ಯ ಸಂಪಾದಕರಾಗಿ ಸೇರಿದರು. ೧೯೮೩ಕ್ಕೆ ನಾನು ಗ್ಯಾಜೆಟಿಯರ್‌ಗೆ ಎರವಲು ಸೇವೆಯ ಮೇಲೆ ಸೇರಿದಾಗ, ನರಸಿಂಹನ್ ಗ್ಯಾಜೆಟಿಯರ್‌ನಲ್ಲಿ ಹಳೆಯ ಹುಲಿಯಾಗಿದ್ದರು. ಗ್ಯಾಜೆಟಿಯರ್‌ನಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಭೂಪಟಗಳ ಸುಪರ್ದಿ, ಛಾಯಾಚಿತ್ರಗಳ ಸುಪರ್ದಿ ಹಾಗೂ ಗ್ಯಾಜೆಟಿಯರ್‌ಗೆ ಬೇಕಾದ ಹಾಗೂ ಕಲೆಗೆ ಸಂಬಂಧಿಸಿದ ವಿವರಗಳ ಪೇಪರ್ ಕಟಿಂಗ್‌ಗಳನ್ನು ಸಂಗ್ರಹಿಸುವುದು ಮುಖ್ಯಕೆಲಸವಾಗಿತ್ತು. ೧೯೮೩ರಲ್ಲಿ ನಾನು ಅಲ್ಲಿಗೆ ಸೇರಿದಾಗ ಭೂಪಟಗಳು ಹಾಗೂ ಛಾಯಚಿತ್ರಗಳ ಸಂಗ್ರಹ ಚೆನ್ನಾಗಿತ್ತು. ನಾನು ಗ್ಯಾಜೆಟಿಯರ್‌ಗೆ ಹೋದಾಗ ನರಸಿಂಹನ್ ರೂಮಿನಲ್ಲಿ ಅವರ ಪಕ್ಕದಲ್ಲಿಯೇ ನನಗೆ ಸ್ಥಳ ಕಲ್ಪಿಸಿದ್ದರು. ಕಾಮತರು ಬಂದು ನಿಮ್ಮಿಬ್ಬರಿಗೂ ಒಳ್ಳೇ ಕಾಂಬಿನೇಷನ್. ಇಲ್ಲೇ ಇರಿ ಎಂದಿದ್ದರು. ಸಾಮಾನ್ಯವಾಗಿ ದಿನದ ೧.೩೦ರಿಂದ ೨.೧೫ರವರೆಗೆ ಊಟದ ಸಮಯ. ಊಟಕ್ಕೆ ಎಸ್.ಎ.ಜಗನ್ನಾಥ, ನಾಗರಾಜ್, ಅಲನ, ಸೂಪರಿಡೆಂಟ್ ಒಬ್ಬರು ಮುಂತಾದವರು ಸೇರುತ್ತಿದ್ದರೂ ನಾನು ಸೇರುತ್ತಿರಲಿಲ್ಲ. ಊಟದ ನಂತರ ಕಾಫಿಗೆ ಹೋಗುತ್ತಿದ್ದೆವು. ಈ ಸಮಯವೇ ಹಳೇ ಪುಸ್ತಕಗಳ ಹುಡುಕಾಟದ ಸಮಯ. ಸೆಂಟ್ರಲ್ ಹೈಸ್ಕೂಲ್ ಕಾಂಪೌಂಡ್ ಮೇಲೆ ಪೇರಿಸಿರುತ್ತಿದ್ದ ಹಳೆಯ ಪುಸ್ತಕಗಳ ಪರಿಶೀಲನೆ, ಆಯ್ಕೆ ಮೊದಲಾದವು ನಡೆಯುತ್ತಿದ್ದವು. ಒಂದೆರಡು ವರ್ಷಗಳಾದ ಮೇಲೆ ಶೇಷಶಾಸ್ತ್ರಿಯವರು ಗ್ಯಾಜೆಟಿಯರ್‌ಗೆ ಬಂದರು. ಅಷ್ಟೊತ್ತಿಗಾಗಲೇ ಅವರ ಕರ್ನಾಟಕದ ವೀರಗಲ್ಲುಗಳು ಪುಸ್ತಕ ಪ್ರಕಟವಾಗಿದ್ದರಿಂದ ಶೇಷಶಾಸ್ತ್ರಿ ಛಾಪು ಅನೇಕರ ಮೇಲೆ ಬಿದ್ದಿತ್ತು. ಗ್ಯಾಜೆಟಿಯರ್‌ಗೆ ಬಂದ ಶೇಷಶಾಸ್ತ್ರಿಯವರೂ ಸಹ ನಮ್ಮ

ಕೋಣೆಗೇ ಬಂದು ಸೇರಿದರು. ಮಧ್ಯಾಹ್ನದ ಬಿಡುವಿನ ವೇಳೆ ಯಾರಾದರೂ ವಿದ್ವಾಂಸರು ಬಂದಾಗ ಚರ್ಚೆ ಇತ್ಯಾದಿಗಳು ನಡೆಯುತ್ತಿದ್ದವು. ಈ ಅವಧಿಯಲ್ಲಿ ಶೇಷಶಾಸ್ತ್ರಿ ಮದುವೆ ನಡೆದಾಗ ಆ ದಂಪತಿಗಳಿಗೆ ಉಡುಗೊರೆಯಾಗಿ ನರಸಿಂಹನ್ ಅವರು ಒಂದು ಚಿತ್ರಕೃತಿಯನ್ನು ರಚಿಸಿ ನೀಡಿದ್ದರು. ಇಂದಿಗೂ ಆ ಚಿತ್ರ ಶೇಷಶಾಸ್ತ್ರಿಯವರಲ್ಲಿದೆ. ಮಂದಲಿಗೆ ಮೇಲೆ ಕುಳಿತಿರುವ ರಸಿಕ ದಂಪತಿಗಳ ಚಿತ್ರದಲ್ಲಿ ಆತ್ಮತೃಪ್ತಿಪಡೆದ ಗಂಡ ಹೇಳುತ್ತಿರುವ ಸಂಗತಿಯನ್ನು ಹೆಂಡತಿ ತದೇಕ ಚಿತ್ತದಿಂದ ಕೇಳುತ್ತಿರುವಂತಿದೆ. ಕ್ಯಾನ್‌ವಾಸ್ ಮೇಲೆ ನರಸಿಂಹನ್ ರಚಿಸಿದ ಅಪರೂಪದ ಚಿತ್ರ. ಬಹುಶಃ ಇಂತಹ ರಚನೆಗಳನ್ನೇ ಮುಂದುವರಿಸಿದ್ದರೆ ಒಂದು ಮಾದರಿಯ ಕಲಾವಿದನಾಗಿ ನರಸಿಂಹನ್ ರೂಪುಗೊಳ್ಳುತ್ತಿದ್ದ. ಏಕೋ-ಏನೋ ಮುಂದೆ ಇಂತಹ ರಚನೆಗಳ ಕಡೆಗೆ ಗಮನ ನೀಡಲಿಲ್ಲ. ಇದೊಂದು ಕೊರತೆ. ಶೇಷಶಾಸ್ತ್ರಿಗಳು ಗ್ಯಾಜೆಟಿಯರ್‌ಗೆ ಪ್ರವೇಶ ಪಡೆದ ಮೇಲೆ ಚಿತ್ರಗಳ ಜೊತೆಗೆ ವೀರಗಲ್ಲು ಶಿಲ್ಪಗಳ ಬಗ್ಗೆಯೂ ಚರ್ಚೆ ನಡೆಯುತ್ತಿತ್ತು. ಹೀಗಾಗಿ ನರಸಿಂಹನ್ ಯಾವುದೇ ಸ್ಥಳಕ್ಕೆ ಹೋದರೂ ಅಲ್ಲಿದ್ದ ಶಾಸನ / ವೀರಗಲ್ಲುಗಳ ಕಡೆಗೂ ಗಮನಹರಿಸತೊಡಗಿದರು. ಪ್ರವಾಸದಿಂದ ಬಂದ ಮೇಲೆ ಅವುಗಳ ಬಗ್ಗೆ ಚರ್ಚೆಯೂ ನಡೆಯುತ್ತಿತ್ತು. ಶೇಷಶಾಸ್ತ್ರಿ ಕೆಲಸಬಿಟ್ಟು ಅನಂತಪುರದ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಅಧ್ಯಾಪಕರಾಗಿ ಹೋದ ಮೇಲೆ ಅವರ ಸ್ಥಾನಕ್ಕೆ ಲಕ್ಷ್ಮಣ್ ತೆಲಗಾವಿಯವರು ಬಂದರು. ಇವರಿಗೂ ನಮ್ಮ ಕೊಠಡಿಯಲ್ಲಿಯೇ ಸ್ಥಳ. ಮತ್ತೆ ಅಧ್ಯಯನ, ಚರ್ಚೆಗಳು ವಿಭಿನ್ನವಾಗಿ ನಡೆಯತೊಡಗಿತು. ತೆಲಗಾವಿಯವರು ತಮ್ಮ ಅಧ್ಯಯನದ ಜೊತೆಗೆ ಉತ್ತಮ ಛಾಯಚಿತ್ರಗಾರರೂ ಆಗಿದ್ದರು. ಇವರು ಚಿತ್ರದುರ್ಗದ ಬಯಲು ಬಂಡೆಗಳ ರೇಖಾ ಚಿತ್ರಗಳ ಮೇಲೆ ಅಧ್ಯಯನ ಮಾಡುತ್ತಿದ್ದರು. ಈ ಬಯಲು ಬಂಡೆಗಳ ರೇಖಾಚಿತ್ರಗಳು ಆದಿಮಾನವನ ಕಾಲದ್ದಾಗಿದ್ದವು. ಇಂತಹ ಸಾಕಷ್ಟು ರೇಖಾ ಚಿತ್ರಗಳನ್ನು ತೆಲಗಾವಿಯವರು ಚಿತ್ರದುರ್ಗಪರಿಸರದಲ್ಲಿ ಗುರುತಿಸಿದ್ದರು. ಇವುಗಳ ಮೇಲೆ ನರಸಿಂಹನ್ ಮತ್ತು ತೆಲಗಾವಿ ಮಧ್ಯೆ ಚರ್ಚೆ ನಡೆಯುತ್ತಿತ್ತು. ಇಂತಹ ಸಂದರ್ಭಗಳಲ್ಲಿ ನಾನು ಮೂಕ ಪ್ರೇಕ್ಷಕನಾಗಿ ಇರುತ್ತಿದ್ದೆ. ಈ ವೇಳೆಗಾಗಲೇ ನರಸಿಂಹನ್ ಎಸ್.ಎಲ್.ಆರ್ ಕ್ಯಾಮರಾ ಹೊಂದಿದ್ದರು. ನನಗೂ ಕ್ಯಾಮರಾ ಬಳಸುವ ಬಗ್ಗೆ ನರಸಿಂಹನ್ ವಿವರಿಸಿ ಹೇಳುತ್ತಿದ್ದರು. ಗ್ಯಾಜೆಟಿಯರ್ ಸಂಪುಟಗಳು ಮುದ್ರಣಕ್ಕೆ ಹೋದಾಗ ನರಸಿಂಹನ್ ಮುದ್ರಣಾಲಯದಲ್ಲಿಯೇ ಹೆಚ್ಚಾಗಿ ಇರುತ್ತಿದ್ದರು. ಇದಕ್ಕೆ ಕಾರಣ ಅವರು ಎರವಲು ಸೇವೆಯಿಂದ ಬಂದಿದ್ದೇ ಸರ್ಕಾರಿ ಮುದ್ರಣಾಲಯದಿಂದ. ಹೀಗಾಗಿ ಗ್ಯಾಜೆಟಿಯರ್ ಸಂಪುಟಕ್ಕೆ ಬೇಕಾದ ಛಾಯಚಿತ್ರಗಳ ಆಯ್ಕೆ, ಅವುಗಳನ್ನು ಪುಟಕ್ಕೆ ಹೊಂದಿಸುವುದು, ಮೊಳೆಗಳಿಂದ ಜೋಡಿಸಿದ ಪುಟದ ಲೇಔಟ್ ಸರಿಯಾಗಿ ಇದೆಯೇ ಇಲ್ಲವೋ ಪರಿಶೀಲಿಸುವುದು, ಗಾಲಿ ಅಚ್ಚಿನ ಪ್ರತಿಯನ್ನು ತಂದು ಮುಖ್ಯ ಸಂಪಾದಕರಿಗೆ ಒಪ್ಪಿಸುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ಅಪರೂಪಕ್ಕೆ ನಾನು ಪ್ರೆಸ್‌ಗೆ ಹೋಗುತ್ತಿದ್ದುದು. ಅಲ್ಲಿನ ನೌಕರರನ್ನು, ಪ್ರೆಸ್‌ನ ಯಜಮಾನನನ್ನು ಛೇಡಿಸುತ್ತಿದ್ದುದು, ಅವರಿಂದ ಕೆಲಸ ತೆಗೆಯುತ್ತಿದ್ದುದು ನರಸಿಂಹನ್ ತಂತ್ರವಾಗಿತ್ತು. ನರಸಿಂಹನ್ ಮಾತಿಗೆ ಯಾರೂ ಕೋಪಗೊಳ್ಳುತ್ತಿರಲಿಲ್ಲ. ನಗುನಗುತ್ತಲೇ ಕೆಲಸ ಮುಗಿಸಿಕೊಡುತ್ತಿದ್ದರು. ಇಂತಹ ವ್ಯಕ್ತಿತ್ವ ನರಸಿಂಹನ್‌ರವರದ್ದು. ಆರಂಭದಲ್ಲಿ ನರಸಿಂಹನ್ ನಾನು ಇಬ್ಬರೂ ಸಾಮಾನ್ಯವಾಗಿ ಪ್ರವಾಸಕ್ಕೆ ಹೋಗುತ್ತಿದ್ದದ್ದು. ನಂತರ ಅವರಿಗೆ ಮೈ ಬಂದ ಮೇಲೆ ಇಲಾಖೆಯ ಕಾರನ್ನು

ಹೆಚ್ಚಾಗಿ ಆಶ್ರಯಿಸುತ್ತಿದ್ದರು. ಶೇಷಶಾಸ್ತ್ರಿಯವರು ನನಗೆ ನೀಡಿದ್ದ ಎಸ್.ಎಲ್.ಆರ್ ಕ್ಯಾಮರಾವನ್ನು ನಾನು ಪ್ರವಾಸ ಹೋದಕಡೆ ಬಳಸುತ್ತಿದ್ದೆ. ನರಸಿಂಹನ್ ಕ್ಯಾಮರಾವನ್ನು ಬಳಸುವುದರ ಜೊತೆಗೆ ಕ್ಯಾಮರಾ, ಫ್ಲಾಷ್ ಮುಂತಾದವುಗಳ ಪ್ರಯೋಗಗಳನ್ನು ಮಾಡುತ್ತಿದ್ದರು. ವರ್ಷಕ್ಕೊಂದು ಗ್ಯಾಜೆಟಿಯರ್ ಹೊರಬರುತ್ತಿದ್ದ ಕಾಲ ಉತ್ತರ ಕನ್ನಡ, ಬೆಳಗಾವಿ, ಮೈಸೂರು, ಬೆಂಗಳೂರು ಜಿಲ್ಲೆ, ಬೆಂಗಳೂರು ಗ್ರಾಮಾಂತರ, ಕೊಡಗು, ಧಾರವಾಡ ಜಿಲ್ಲೆಗಳ ಕಾರ್ಯ ನಡೆಯುವಾಗ ನಾನು ಗ್ಯಾಜೆಟಿಯರ್‌ನಲ್ಲಿದ್ದೆ. ಸೂರ್ಯನಾಥ ಕಾಮತರ ಸಂಪಾದಕತ್ವದಲ್ಲಿ ಬಂದ ಧಾರವಾಡ ಜಿಲ್ಲೆ ಕೊನೆಯದು. ಕಾಮತರು ನಿವೃತ್ತರಾದ ಕೆಲವೇ ತಿಂಗಳ ನಂತರ ನಾನೂ ಗ್ಯಾಜೆಟಿಯರ್ ಬಿಟ್ಟೆ. ಈ ಸಂಪುಟಗಳಲ್ಲಿ ಬಳಸಿರುವ ಚಿತ್ರಗಳಲ್ಲಿ ಬಹಳಷ್ಟು ನರಸಿಂಹನ್ ಅವರವು. ಉತ್ತರ ಕನ್ನಡ ಜಿಲ್ಲಾ ಸಂಪುಟದಲ್ಲಿನ ಬಹಳಷ್ಟು ಚಿತ್ರಗಳು ಕೃಷ್ಣಾನಂದ ಕಾಮತರವು. ಕೃಷ್ಣಾನಂದ ಕಾಮತ್ರು ಹೊನ್ನಾವರದವರು. ಹೀಗಾಗಿ ಸೂರ್ಯನಾಥಕಾಮತರು ಕೃಷ್ಣಾನಂದ ಕಾಮತರನ್ನು ಉತ್ತರ ಕನ್ನಡ ಜಿಲ್ಲೆಯ ಸ್ಥಳಗಳ ಛಾಯಾಚಿತ್ರ ತೆಗೆಯಲು ಜೊತೆಯಲ್ಲಿ ಪ್ರವಾಸಕ್ಕೆ ಕರೆದು ಕೊಂಡು ಹೋಗುತ್ತಿದ್ದರು. ಕೆಲವೊಮ್ಮೆ ನರಸಿಂಹನ್ ಹೋಗುತ್ತಿದ್ದರು. ಹಿಂದಿನ ಗ್ಯಾಜೆಟಿಯರ್‌ಗಳಲ್ಲಿ ಕೇವಲ ವಾರ್ತಾ ಇಲಾಖೆಯವರು ನೀಡಿದ ಚಿತ್ರಗಳನ್ನು ಮಾತ್ರ ಹಾಕುವ ಪದ್ಧತಿ ಬಿಟ್ಟು ಅವುಗಳೊಂದಿಗೆ ಆಸಕ್ತರಿಂದ, ಇಲಾಖೆಯ ನರಸಿಂಹನ್, ನಾನು, ತೆಲಗಾವಿ ಮೊದಲಾದವರು ತೆಗೆದ ಚಿತ್ರಗಳನ್ನು ಬಳಸಲಾಯಿತು. ಈ ಚಿತ್ರಗಳನ್ನು ಪುಟಕ್ಕೆ ಹೊಂದಿಕೊಳ್ಳುವಂತೆ ಒಪ್ಪವಾಗಿ ಜೋಡಿಸುವ ಕೆಲಸ ನರಸಿಂಹನ್ ಅವರದಾಗಿತ್ತು. ಇದರಿಂದ ಗ್ಯಾಜೆಟಿಯರ್ ಸಂಪುಟಗಳು ಈ ಅವಧಿಯಲ್ಲಿ ಹೊಸರೂಪ ರೇಖೆಗಳನ್ನು ಪಡೆದು ಹೊರಬಂದವು. ಇದರ ಹಿಂದೆ ನರಸಿಂಹನ್ ಅವರ ಶ್ರಮ ಸಾಕಷ್ಟಿತ್ತು.

ನರಸಿಂಹನ್, ನಾನು ಮತ್ತು ಮಂಜುಳಾ ಮೂವರು ೧೯೮೬ರಲ್ಲಿ ಅಧಿಕೃತವಾಗಿ ಪಿಎಚ್.ಡಿ ರಿಜಿಸ್ಟ್ರೇಷನ್ ಮಾಡಿಸಿದೆವು. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ನಮ್ಮ ರಿಜಿಸ್ಟ್ರೇಷನ್. ಇದರಲ್ಲಿ ಮಂಜುಳಾ ಅವರದ್ದು ಕೆ.ಎಸ್. ನರಸಿಂಹಸ್ವಾಮಿಯವರ ಸಾಹಿತ್ಯದ ಮೇಲೆ ವಿಷಯ ಆಯ್ಕೆಯಾಗಿತ್ತು. ಆದರೆ ನನ್ನದೂ ಮತ್ತು ನರಸಿಂಹನ್ ವಿಷಯ ಬೇರೆ ಆಗಿತ್ತು. ನನ್ನದು 'ತಲಕಾಡಿನ ಗಂಗರ ದೇವಾಲಯಗಳ ಅಧ್ಯಯನ'ವಾದರೆ ನರಸಿಂಹನ್ ಅವರದ್ದು ಕರ್ನಾಟಕ ಭಿತ್ತಿ ಚಿತ್ರಕಲೆ ಇಬ್ಬರಿಗೂ ವಿಶ್ವವಿದ್ಯಾಲಯದ ಹೊರಗಿನವರೇ ಗೈಡ್. ನನಗೆ ಎಂ.ವಿ.ಸೀತಾರಾಮಯ್ಯ. ನರಸಿಂಹನ್ ವರಿಗೆ ಪ್ರೊ. ಕ.ವೆಂ.ರಾಜಗೋಪಾಲ್. ಇಬ್ಬರೂ ಸಾಹಿತಿಗಳು. ಆದರೆ ವಿಷಯ ವಿಂಗಡಣೆ, ನಿರೂಪಣಾ ರೀತಿಯ ಮಾರ್ಗದರ್ಶನ ಮಾಡುವುದರಲ್ಲಿ ಇಬ್ಬರೂ ನಿಪುಣರೇ ಆಗಿದ್ದರು. ನಮ್ಮ ಜಿಲ್ಲಾ ಗ್ಯಾಜೆಟಿಯರ್ ಪ್ರವಾಸಗಳು ನಮ್ಮ ಪಿಎಚ್.ಡಿ ಕಾರ್ಯಕ್ಕೂ ವರವಾಗಿ ಪರಿಣಮಿಸಿತು. ಪ್ರವಾಸದಲ್ಲಿ ನನ್ನ ಕ್ಯಾಮರಾ ಕಣ್ಣು ಶಿಲ್ಪ-ದೇವಾಲಯಗಳನ್ನು ಹುಡುಕುತ್ತಿದ್ದರೆ, ನರಸಿಂಹನ್ ಕ್ಯಾಮರಾ ಚಿತ್ರಕಲೆಯನ್ನು ಹುಡುಕುತ್ತಿದ್ದವು. ಪ್ರವಾಸಕ್ಕೆ ಮೊದಲೇ ಈ ಬಗ್ಗೆ ಮಾಹಿತಿ ಪಡೆದು ಇಂತಿಂತಹ ಜಾಗಕ್ಕೆ ಹೋಗಬೇಕೆಂದು ತೀರ್ಮಾನಿಸಿ ಅದರಂತೆ ಕ್ಷೇತ್ರಕಾರ್ಯ ಮಾಡುತ್ತಿದ್ದೆವು. ಇಬ್ಬರೂ ಬೇರೆ ಬೇರೆ ಕಡೆ ಪ್ರವಾಸ ಹೋದಾಗ ಇಬ್ಬರಿಗೂ ಬೇಕಾದ ಶಿಲ್ಪ ಛಾಯಚಿತ್ರಗಳ ಚಿತ್ರ ಹಾಗೂ ವಿವರಗಳನ್ನು ಪಡೆದು ವಿನಿಮಯ ಮಾಡಿಕೊಳ್ಳುತ್ತಿದ್ದೆವು. ಕೆಲವೊಮ್ಮೆ ರಜೆಯ ದಿನಗಳಂದು ನಮಗೆ ಬೇಕಾದ ಚಿತ್ರಗಳ

ಛಾಯಾ ಚಿತ್ರ ತೆಗೆಯಲು ಹೋಗುತ್ತಿದ್ದೆವು. ತುಮಕೂರು ಜಿಲ್ಲೆಯ ಕರೆಗೋಡು ರಂಗಾಪುರ, ಸೀಬಿ, ಸಿರಾ, ತುಮಕೂರು, ಹಂಪೆ, ಹಿರೇಬೆಣಕಲ್ಲು, ಸುರಪುರ, ಬೆಳ್ಳೂರು ಕ್ರಾಸ್ ಮೊದಲಾದ ಕಡೆಗಳಲ್ಲಿ ಇಬ್ಬರೇ ರಜೆದಿನದಂದು ಹೋಗಿ ಛಾಯಾಚಿತ್ರಗಳನ್ನು ಪಡೆಯುತ್ತಿದ್ದೆವು. ನಾವು ಚಿತ್ರಗಳನ್ನು ತೆಗೆದ ಕೆಲವು ಸ್ಥಳಗಳು ಈಗ ಇಲ್ಲ; ನೆಲಸಮವಾಗಿವೆ. ಅವು ನರಸಿಂಹನ್ ಅವರ ನೆಗೆಟಿವ್‌ನಲ್ಲಿ ಮಾತ್ರ ಉಳಿದಿವೆ. ಹೀಗೆ ಸಂಗ್ರಹಿಸಿದ ಸಾವಿರಾರು ನೆಗೆಟಿವ್‌ಗಳು ನರಸಿಂಹನ್ ಅವರ ಸಂಗ್ರಹದಲ್ಲಿ ಉಳಿದಿವೆ.

ಪ್ರವಾಸ ಹೋಗಿ ಬಂದ ಮೇಲೆ ಅವನ್ನು ತೊಳೆಸಿ ಪ್ರಿಂಟ್ ಹಾಕಿಸಬೇಕಿತ್ತು. ಈ ಚಿತ್ರಗಳಿಗೆ ಯಾರೂ ಹಣವನ್ನು ನೀಡುತ್ತಿರಲಿಲ್ಲ. ಕೈಯಿಂದಲೇ ಹಾಕಬೇಕಿತ್ತು. ವಾರಕ್ಕೊಮ್ಮೆ ಫಿಲಂಗಳನ್ನು ತೊಳೆಸಲು ಪ್ರಿಂಟ್ ಹಾಕಲು ಅವೆನ್ಯೂ ರಸ್ತೆಯಲ್ಲಿದ್ದ ಎಂಪೈರ್ ಸ್ಟುಡಿಯೋಗೆ ಹೋಗುತ್ತಿದ್ದೆವು. ಅಲ್ಲಿನ ಮಾಲೀಕರು ಗುರಪ್ಪ ಅಂತ. ನರಸಿಂಹನ್ ಹೋದೊಡನೆ ಬನ್ನಿ ನರಸಿಂಹನ್ ಎಂದು ಹೇಳಿ ಫಿಲಂ ರೋಲ್ ತೆಗೆದುಕೊಂಡು ಮುತುವರ್ಜಿ ವಹಿಸಿ ಕೆಲಸಮಾಡಿಕೊಡುತ್ತಿದ್ದರು. ಏಕೆಂದರೆ ಬಹುದೂರ ಪ್ರಯಾಣಮಾಡಿ ಸಂಗ್ರಹಿಸಿಕೊಂಡು ಬಂದಿದ್ದ ಫಿಲಂ ರೋಲನ್ನು ಸರಿಯಾಗಿ ತೊಳೆಯದೆ ಕೆಡಿಸಿದರೆ? ನೀರಿನಲ್ಲಿ ಹೋಮಮಾಡಿದಂತಾಗುತ್ತಿತ್ತು. ಹೀಗಾಗಿ ಈ ಛಾಯಾಚಿತ್ರಗಳನ್ನು ತೆಗೆಯುವ ಹುಚ್ಚಿಗೆ ಬಿದ್ದಿದ್ದರಿಂದ ಹೆಚ್ಚಿನ ಹಣ ವೆಚ್ಚವಾಗುತ್ತಿತ್ತೇ ವಿನಃ ಏನೂ ಪ್ರತಿಫಲವಿರಲಿಲ್ಲ. ಇಷ್ಟಾದರೂ ಎಂದೂ ಯಾರ ಬಳಿಯೂ ಸಾಲ ಹೇಳುತ್ತಿರಲಿಲ್ಲ ಕೇಳುತ್ತಿರಲಿಲ್ಲ. ಬಹುಶಃ ಇವರ ಶ್ರೀಮತಿ ಮಂಜುಳಾ ಅವರ ಪ್ರೋತ್ಸಾಹವೂ ಇದಕ್ಕೆ ಕಾರಣವಿತ್ತು.

ಇವರ ಮೂಲಮುಖ ಚಿತ್ರಕಲೆ ಕಡೆಗೆ ಬಂದಾಗ ಇವರ ಇನ್ನೊಂದು ಮಗ್ಗುಲು ಕಾಣುತ್ತಿತ್ತು. ಮಧ್ಯಾಹ್ನದ ಹೊತ್ತಿಗೆ ಸಾಮಾನ್ಯವಾಗಿ ಕ.ವೆಂ.ರಾಜಗೋಪಾಲ, ಚಿತ್ರಕಾರ ಚಂದ್ರಶೇಖರ್, ಸುಬ್ರಹ್ಮಣ್ಯ ಮೊದಲಾದವರು ಆಗಾಗ್ಗೆ ಬರುತ್ತಿದ್ದರು. ಇವರು ಬಂದಾಗ ಚಿತ್ರಗಳು, ಚಿತ್ರಮೇಳಗಳು ಮೊದಲಾದವುಗಳ ಬಗ್ಗೆಯೇ ಚರ್ಚೆನಡೆಯುತ್ತಿತ್ತು. ಕ.ವೆಂ. – ತೆಲಗಾವಿ – ನಾನು ಚರ್ಚೆಗೆ ಇಳಿದರೆ ನರಸಿಂಹನ್ ಮೂಕ ಪ್ರೇಕ್ಷಕನಾಗುತ್ತಿದ್ದ. ನಮ್ಮ ವಾದ-ವಿವಾದ ಶಬ್ದವೇದಿಯಾಗುತ್ತಿತ್ತು. ಎಷ್ಟೋ ಬಾರಿ ಮುಖ್ಯಸಂಪಾದಕರಾಗಿದ್ದ ಸೂರ್ಯನಾಥ ಕಾಮತರು ಹೊರಗೆ ಬಂದು ಗಮನಿಸಿ ಹೋಗಿದ್ದೂ ಉಂಟು. ಈ ವಾದ ವಿವಾದಗಳು ಕಲೆಗೆ – ವಾಸ್ತುವಿಗೆ – ಶಿಲ್ಪಗಳಿಗೆ ಸಂಬಂಧಿಸಿ ನಡೆಯುತ್ತಿತ್ತು. ಇದೆಲ್ಲಾ ಅಂತ್ಯದಲ್ಲಿ ಕಾಫಿಯ ಸೇವನೆಯೊಂದಿಗೆ ಮುಕ್ತಾಯವಾಗುತ್ತಿತ್ತು. ಅನೇಕ ಚಿತ್ರಕಲಾವಿದ್ಯಾರ್ಥಿಗಳೂ ಬಂದು ನರಸಿಂಹನ್ ಅವರೊಂದಿಗೆ ಚರ್ಚಿಸುತ್ತಿದ್ದರು.

ನರಸಿಂಹನ್ ಕಲೆಗೆ ಸಂಬಂಧಿಸಿದ ಒಂದು ಪತ್ರಿಕೆ ಹೊರತರುತ್ತಿದ್ದರು. ಅದರ ಹೆಸರು **ಕಲಾ ವಿಕಾಸ**. ಒಂದೊಂದು ಸಂಚಿಕೆ ಹೊರತರುವಾಗ ಆರ್ಥಿಕ ನಷ್ಟ ಅನುಭವಿಸುತ್ತಿದ್ದರು. ಶೇಷಶಾಸ್ತ್ರಿ ಮತ್ತು ನಾನು ಸೇರಿ ನಿಲ್ಲಿಸುವುದೇ ಸೂಕ್ತವೆಂದು ಅಭಿಪ್ರಾಯ ವ್ಯಕ್ತಪಡಿಸಿದೆವು. ಆದರೂ ನರಸಿಂಹನ್ ಅವರು ಅದನ್ನು ನಿಲ್ಲಿಸಲೇ ಇಲ್ಲ. ಅನೇಕ ಕಲಾ ಕೃತಿಗಳ ವಿಮರ್ಶೆಗಳು ಈ ಕಲಾವಿಕಾಸ ಪತ್ರಿಕೆಯಲ್ಲಿ ಬರುತ್ತಿದ್ದವು. ಮುಂದೊಂದು ದಿನ ತೀವ್ರ ನಷ್ಟವಾಗಿ ಇದನ್ನು ನಿಲ್ಲಿಸಲಾಯಿತು. ಏಕೆಂದರೆ ಯಾವ ಕಲಾವಿದರೂ ಇದನ್ನು ಪೋಷಿಸಲಿಲ್ಲ. ನಾನು ಗ್ಯಾಜೆಟಿಯರ್‌ನಲ್ಲಿದ್ದಾಗಲೇ ನರಸಿಂಹನ್

ಮತ್ತವರ ಮಿತ್ರರು ಚಂದ್ರಶೇಖರ್ ಮೊದಲಾದವರು ಕಲಾಮೇಳವನ್ನು ಆಯೋಜಿಸಿದರು. ನರಸಿಂಹನ್ ಕಲಾಮೇಳಕ್ಕೆ ಖಜಾಂಚಿ. ಇದಕ್ಕೆ ಒಂದು ಚಿಹ್ನೆಯನ್ನು ರೂಪಿಸಬೇಕಿತ್ತು. ಆಗತಾನೇ ಕುಕ್ಕನೂರಿನಲ್ಲಿ ಗಂಗರಾಜ ಮಾರಸಿಂಹನ ತಾಮ್ರಪಟ ದೊರೆತಿತ್ತು. ಇದರ ಮುದ್ರೆ ಬಹುಚೆನ್ನಾಗಿತ್ತು. ಅಷ್ಟಮಂಗಲಗಳ ಮಧ್ಯೆ ಆನೆ; ಕೆಳಗೆ ಮಾರಸಿಂಹ ಎಂಬ ಹೆಸರಿತ್ತು. ಇದನ್ನು ನರಸಿಂಹನ್ ಅವರಿಗೆ ತೋರಿಸಿದಾಗ ಇದನ್ನೇ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಕಲಾಮೇಳ ಎಂದು ತಿದ್ದಪಡಿ ಮಾಡಿದ್ದಲ್ಲದೆ ಅದನ್ನು ಎಲ್ಲರೂ ಧರಿಸಲು ಅನುಕೂಲವಾಗುವಂತೆ ಲೋಹದಲ್ಲಿ ಎರಕಹೋಯ್ದು ಭಾಗವಹಿಸಿದವರಿಗೆ ಹಂಚಿದರು. ಈ ಕಲಾಮೇಳ ಕೆಲವು ವರ್ಷಗಳು ನಡೆದವು. ನಂತರ ನಿಂತು ಹೋಯಿತು.

ಮುಂದೆ ಕರ್ನಾಟಕ ಲಲಿತ ಕಲಾ ಅಕಾಡೆಮಿಗೆ ತಿಪ್ಪೇಸ್ವಾಮಿಯವರು ಅಧ್ಯಕ್ಷರಾಗಿ ಬಂದರು. ಮರಿಶಾಮಾಚಾರರು ಅವರು ಲಲಿತ ಕಲಾ ಅಕಾಡೆಮಿಯ ಸಕಲವೂ ಆಗಿದ್ದರು. ಈ ಅವಧಿಯಲ್ಲಿ ನರಸಿಂಹನ್ ಕರ್ನಾಟಕದ ರಾಜಮನೆಗಳ ಶಿಲ್ಪಗಳ ಬಗ್ಗೆ ಕೆಲವು ಪುಸ್ತಕಗಳನ್ನು ಬರೆಸಿದರು. ಗಂಗರ ಶಿಲ್ಪಕಲೆ, ಹೊಯ್ಸಳ, ಬಾದಾಮಿ ಚಾಲುಕ್ಯ, ವಿಜಯನಗರ ಮೊದಲಾದ ರಾಜಮನೆತನಗಳನ್ನು ಕುರಿತಂತೆ ನುರಿತ ವಿದ್ವಾಂಸರಿಂದ ಪುಸ್ತಕಗಳನ್ನು ಬರೆಯಿಸಿ ಪ್ರಕಟಿಸಿದರು. ಚಿತ್ರಕಲಾ ಪರಿಷತ್ತಿನಲ್ಲಿ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಸೇರಿದ್ದರಿಂದ ಸೀಮಿತ ವ್ಯಕ್ತಿಗಳಿಗೆ ಮಾತ್ರ ಅಲ್ಲಿ ಪ್ರವೇಶವಿತ್ತು. ಹೀಗಾಗಿ ಬಹಳ ಜನ ಲಲಿತ ಕಲಾ ಅಕಾಡೆಮಿ ಕಡೆಗೆ ಮುಖಮಾಡಿದ್ದರು. ಹೀಗಾಗಿ ಸಿಕ್ಕಿದ ಅಲ್ಪಕಾಲದ ಅವಕಾಶವನ್ನು ಬಳಸಿಕೊಂಡು ನರಸಿಂಹನ್ ಅವರು ತಮ್ಮ ಕಾರ್ಯ ವೈಖರಿ ಹೇಗಿರುತ್ತದೆ ಎಂಬುದನ್ನು ತೋರಿಸಿದರು.

ಪಿಎಚ್.ಡಿಗಾಗಿ ನರಸಿಂಹನ್ ಆಯ್ಕೆ ಮಾಡಿಕೊಂಡಿದ್ದ ವಿಷಯ ಚಿತ್ರಕಲೆಗೆ ಸಂಬಂಧಿಸಿದ್ದು. ಅಲ್ಲಿಯವರೆಗೆ ಶಿವರಾಮಕಾರಂತ ಮೊದಲಾದವರು ಅಲ್ಲಲ್ಲಿ ಕರ್ನಾಟಕದ ಚಿತ್ರಗಳ ಬಗ್ಗೆ ತಮ್ಮ ಕೃತಿಗಳಲ್ಲಿ ಉಲ್ಲೇಖಿಸುತ್ತಿದ್ದರು. ಅಷ್ಟು ಬಿಟ್ಟರೆ ವ್ಯಾಪಕವಾಗಿ ಯಾರೂ ಚಿತ್ರಕಲೆಗೆ ಸಂಬಂಧಿಸಿದಂತೆ ವಿವರವಾಗಿ ಮಾಹಿತಿ ಸಂಗ್ರಹಿಸಿರಲಿಲ್ಲ. ಹಾಗೆಯೇ ವಿಶ್ಲೇಷಣೆ ಕೂಡ ಮಾಡಿರಲಿಲ್ಲ. ನರಸಿಂಹನ್ ಒಬ್ಬರು ಮಾತ್ರ ಕರ್ನಾಟಕದಾದ್ಯಂತ ಸಂಚರಿಸಿ ಚಿತ್ರಕಲೆಗೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಿ, ಕರ್ನಾಟಕ ಭಿತ್ತಿ ಚಿತ್ರಕಲೆ ಎಂಬ ಮಹಾ ಪ್ರಬಂಧವನ್ನು ಬರೆದು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಡಾಕ್ಟರೇಟ್ ಪದವಿ ಪಡೆದಿದ್ದರು. ಇವರ ಮಾರ್ಗದರ್ಶಕರಾದ ಪ್ರೊ.ಕ.ವೆಂ.ರಾಜಗೋಪಾಲ ಅವರು ನರಸಿಂಹನ್ ಬರೆದದ್ದನ್ನು ಬಡಪಟ್ಟಿಗೆ ಒಪ್ಪುತ್ತಿರಲಿಲ್ಲ. ಬರೆದಿದ್ದನ್ನೇ ಅನೇಕ ಬಾರಿ ತಿದ್ದಿ ಬರೆಯಬೇಕಿತ್ತು. ನರಸಿಂಹನ್ ಬೇಸರಗೊಂಡರೂ ಈ ಕ್ರಿಯೆ ಅನಿವಾರ್ಯವಾಗಿತ್ತು. ಅಂತೂ ಪಿಎಚ್.ಡಿ ಪಡೆಯುವ ವೇಳೆಗೆ ಸುಮಾರು ೧೦ವರ್ಷಗಳೇ ಮುಗಿದವು. ಈ ಮಹಾಪ್ರಬಂಧವು ನರಸಿಂಹನ್ ಮಿತ್ರ ಚಂದ್ರಶೇಖರ್ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಪುಟಮಿತಿಯೊಂದಿಗೆ ಕರ್ನಾಟಕ ಭಿತ್ತಿ ಚಿತ್ರಕಲೆ ಎಂಬ ಹೆಸರಿನಲ್ಲಿ ಪ್ರಕಟವಾಯಿತು. ಈ ಗ್ರಂಥ ಮೊದಲಬಾರಿಗೆ ಕರ್ನಾಟಕದ ಸಮಗ್ರ ಭಿತ್ತಿ ಚಿತ್ರಕಲೆಯ ಪರಿಚಯ ಮಾಡಿಸಿತ್ತು. ತಮ್ಮ ಅಪಾರ ಶ್ರಮ ಮತ್ತು ಸಮಯವನ್ನು ವಿನಿಯೋಗಿಸಿ ರಚಿಸಿದ್ದ ಕೃತಿ ಇದಾಗಿತ್ತು. ಇಷ್ಟಾದರೂ ಈ ಕೃತಿ ಪ್ರಕಟವಾದ ಮೇಲೆಯೂ ನರಸಿಂಹನ್‌ರವರಿಗೆ ಯಾವುದೇ ಗುರುತರ ಪ್ರಶಸ್ತಿಗಳಾಗಲಿ, ಕಾರ್ಯಭಾರಗಳಾಗಲಿ

ಹುಡುಕಿಕೊಂಡು ಬರಲಿಲ್ಲ. ಎಲ್ಲರಿಗೂ ಅವರು ಸಂಗ್ರಹಿಸಿದ್ದ ಪುಸ್ತಕಗಳು ಮತ್ತು ನೆಗೆಟೀವ್‌ಗಳ ಮೇಲೆಯೇ ಕಣ್ಣು.

ನರಸಿಂಹನ್ ಅವರ ಸೇವೆ ಚಿತ್ರಕಲೆಗೇ ಸೀಮಿತವಾಗಿರಲಿಲ್ಲ. ಕರ್ನಾಟಕ ಇತಿಹಾಸ ಅಕಾದೆಮಿಯು ಬೆಂಗಳೂರಿನಲ್ಲಿ ಪ್ರಾರಂಭವಾದಾಗ, ಆರಂಭದ ಸದಸ್ಯರೂ ಇವರಾಗಿದ್ದರು. ಇದರೊಂದಿಗೆ ಅಕಾದೆಮಿಯ ರಿಜಿಸ್ಟೆರ್ಡ್ ವಿಳಾಸ ಇವರ ಮನೆಯೇ ಆಗಿತ್ತು. ವಾಸ್ತವವಾಗಿ ಈತ ಕಚೇರಿಗೆ ಬಂದಾಗ ಮನೆಯಲ್ಲಿರುತ್ತಿದ್ದ ಇವರ ಮಾವ ಮತ್ತು ಅತ್ತೆಯವರು ಇತಿಹಾಸ ಅಕಾದೆಮಿ ವಿಳಾಸಕ್ಕೆ ಬರುತ್ತಿದ್ದ ಅಂಚೆಯನ್ನು ಸಂಗ್ರಹಿಸಿರುತ್ತಿದ್ದರು. ಬೆಳಗ್ಗೆ ಕಚೇರಿಗೆ ಬರುವಾಗ ಇವರು ಅವನ್ನು ತರುತ್ತಿದ್ದರು. ಇವರ ಮನೆಯೇ ಇತಿಹಾಸ ಅಕಾದೆಮಿಗೆ ನೀಡಲು ಕಾರಣ ಯಾರಿಗೂ ಸ್ವಂತ ಮನೆ ವಿಳಾಸವಿರಲಿಲ್ಲ. ಕಾಮತರು ಮುಖ್ಯಸಂಪಾದಕರಾಗಿದ್ದುದರಿಂದ ವಿಳಾಸ ನೀಡುವಂತಿರಲಿಲ್ಲ. ಹೀಗಾಗಿ ನಾಲ್ಕುವರ್ಷಗಳ ಕಾಲ ಇವರ ಮನೆ ವಿಳಾಸವು ಇತಿಹಾಸ ಅಕಾದೆಮಿಯ ಆಶ್ರಯವಾಗಿತ್ತು. ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಜೊತೆಗೆ ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದ ಪರೀಕ್ಷೆಗಳು. ಇವು ಪ್ರಾರಂಭವಾದ ಮೇಲೆ ಗೋಖಲೆ ಸಾರ್ವಜನಿಕ ಸಂಸ್ಥೆಗೆ ಸ್ಥಳಾಂತರಿಸುವ ಕಾಲದವರೆಗೆ ನರಸಿಂಹನ್ ಅಂಚೆಪೇದೆ ಕೆಲಸವನ್ನು ನಗುಮೊಗದಿಂದ ಮಾಡುತ್ತಿದ್ದರು. ಮುಂದೆ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಭಿತ್ತಿ ಪತ್ರಗಳನ್ನು ರಚಿಸುವಲ್ಲಿಯೂ ಇವರ ಸಹಕಾರ ನಿರಂತರವಾಗಿತ್ತು. ಹೀಗಾಗಿ ಇತಿಹಾಸ ಅಕಾಡೆಮಿಯ ಆಧಾರಸ್ಥಂಭಗಳಲ್ಲಿ ಇವರೂ ಒಬ್ಬರಾಗಿದ್ದರು. ಇಷ್ಟೆಲ್ಲಾ ಓಡಾಟಗಳಿಗೆ ಇವರು ಯಾವುದೇ ಪ್ರತಿಫಲವನ್ನು ಬಯಸದೇ ಇದ್ದದ್ದೇ ಇವರ ದೊಡ್ಡತನ. ಇವರ ಮುಖ್ಯವಾದ ತೊಂದರೆ ಎಂದರೆ ಬಸ್ ಹತ್ತಲು ಆಗುತ್ತಿರಲಿಲ್ಲ. ಹೀಗಾಗಿ ಇತ್ತೀಚೆಗೆ ಎಲ್ಲಿಯಾದರೂ ಹೋಗಬೇಕಿದ್ದಲ್ಲಿ ಆಟೋ, ಟ್ಯಾಕ್ಸಿ ಮುಂತಾದವುಗಳ ನೆರವು ಬೇಕಿತ್ತು.

ಇತ್ತೀಚೆಗೆ ಆರೋಗ್ಯ ಕ್ಷೀಣಿಸುತ್ತಿದ್ದ ಅರಿವು ನರಸಿಂಹನ್ ಅವರಿಗೆ ಬಂದಿತ್ತು. ತಾನು ಸಂಗ್ರಹಿಸಿದ ಪುಸ್ತಕಗಳ ಸಂಗ್ರಹವನ್ನು ಏನು ಮಾಡಬೇಕೆಂಬ ತೂಗುಯ್ಯಾಲೆಯಲ್ಲಿ ಬಿದ್ದಿದ್ದರು. ಆಪ್ತರ ಬಳಿ ಈ ಬಗ್ಗೆ ಚರ್ಚಿಸಿದ್ದರು. ಆದರೆ ಯಾವುದೇ ತೀರ್ಮಾನಕ್ಕೆ ಬಂದಿರಲಿಲ್ಲ.

ನರಸಿಂಹನ್ ಅವರ ಒಂದು ಕೊರತೆಯೆಂದರೆ ಅಗಾಧವಾಗಿ ತಿಳಿದುಕೊಂಡಿದ್ದ ವಿಷಯವನ್ನು ಜನಪ್ರಿಯವಾಗಿ ನಿರೂಪಿಸಲು ಆಗದಿದ್ದದು. ಸ್ಲೈಡ್‌ಗಳನ್ನು ತೋರಿಸಿದರೂ ವಿವರಣೆ ನೀಡುವಲ್ಲಿ ತೊದಲುತ್ತಿದ್ದ. ಹೀಗಾಗಿ ಬರವಣಿಗೆಯಲ್ಲಿ ತೊಡಗಿದಷ್ಟು ವಾಚಾಳಿತನದಲ್ಲಿರಲಿಲ್ಲ. ಚಿತ್ರಕಲೆಯ ಮೇಲೆ ಕೆಲಸಮಾಡ ಬಯಸುವ ಹುಡುಗರಿಗೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದರು. ಯಾವುದೇ ವಿಷಯಗಳನ್ನು ಮುಚ್ಚಿಟ್ಟುಕೊಳ್ಳುತ್ತಿರಲಿಲ್ಲ.

ಒಬ್ಬ ತಾಳ್ಮೆಯ ಚರ್ಚೆಗಾರ, ಉತ್ತಮ ಛಾಯಚಿತ್ರಗಾರ, ಗುರುಗಳ ನೆಚ್ಚಿನ ಶಿಷ್ಯರಾಗಿದ್ದ, ಓರಿಯ ಗುಣವುಳ್ಳ ವ್ಯಕ್ತಿ ಇಂದು (೫.೪.೨೦೧೩) ನಮ್ಮನ್ನು ಅಕಾಲಿಕವಾಗಿ ಅಗಲಿದ್ದು ಚಿತ್ರಕಲೆಗೆ ತುಂಬಲಾರದ ನಷ್ಟವಾಗಿದೆ. ಮಿತ್ರನ ಆತ್ಮಕ್ಕೆ ಶಾಂತಿಸಿಗಲಿ.

■

# ವಿಶೇಷ ಸಂಚಿಕೆಗಳ ಮಾರಾಟ

'ಇತಿಹಾಸ ದರ್ಪಣ'ವು ಈವರೆಗೆ ಮೂರು ಸಂಗ್ರಹ ಯೋಗ್ಯವಾದ ವಿಶೇಷ ಸಂಚಿಕೆಗಳನ್ನು ಹೊರತಂದಿದೆ. ಆಯಾ ಕ್ಷೇತ್ರದ ತಜ್ಞರಿಂದಲೇ ಬರೆಸಿ ಹೊರತಂದ ಈ ಕೃತಿಗಳು ನಮ್ಮಲ್ಲಿ ಲಭ್ಯವಿವೆ.

*೧. ಕೃಷ್ಣ(ದೇವ)ರಾಯ ಮತ್ತು ವಿಜಯನಗರ ಸಾಮ್ರಾಜ್ಯ*

ಒಟ್ಟು ಪುಟಗಳು: ೧೨೦, ಬೆಲೆ: ರೂ. ೯೦/-

ಈ ಕೃತಿಯು ನಾಡಿನ ಮತ್ತು ಹೊರನಾಡಿನ ಹಿರಿಯ ಹಾಗೂ ಯುವ ಸಂಶೋಧಕರುಗಳಾದ ಎಂ.ವಿ.ಶ್ರೀನಿವಾಸ್, ಎಸ್.ಕೆ.ಅರುಣಿ, ಫಾದರ್ ಹೆರಾಸ್, ಶ್ರೀನಿವಾಸ ಸಿಸ್ತ್ಲ, ಕೆ.ಜಿ.ಗೋಪಾಲಕೃಷ್ಣರಾವ್, ಸಿ.ಬಿ.ಪಾಟೀಲ, ಪಿ.ವಿ.ಕೃಷ್ಣಮೂರ್ತಿ, ಎಸ್.ವೆಂಕಟರಮಣಯ್ಯ, ಎಚ್.ಎಸ್.ಗೋಪಾಲ್ ರಾವ್, ಮನು ವಿ. ದೇವದೇವನ್, ಹರಿಹರ ಶ್ರೀನಿವಾಸರಾವ್, ಕೆ.ವಸಂತಲಕ್ಷ್ಮಿ, ಕೂ.ಸ.ಅಪರ್ಣ, ಗಿರಿಜಾಪತಿ, ಆರ್.ಶೇಷಶಾಸ್ತ್ರಿ, ಅ.ಲ.ನರಸಿಂಹನ್ ಹಾಗೂ ಸುಂಕಂ ಗೋವರ್ಧನ ಅವರುಗಳ ವಿದ್ವತ್ಪೂರ್ಣ ಲೇಖನಗಳನ್ನು ಒಳಗೊಂಡಿದೆ.

***೨. ನಮ್ಮ ಬೆಂಗಳೂರು.***

ಒಟ್ಟು ಪುಟಗಳು: ೧೧೨, ಬೆಲೆ: ರೂ. ೧೦೦/-

ಈ ಕೃತಿಯು ಎಚ್.ಎಸ್.ದೊರೆಸ್ವಾಮಿ, ಸುಂಕಂ.ಗೋವರ್ಧನ, ಪಿ.ವಿ.ಕೃಷ್ಣಮೂರ್ತಿ, ಎಸ್.ಕೆ.ಅರುಣಿ, ಎಂ.ಜಮುನ, ಸುರೇಶ್ ಮೂನ, ಎಸ್.ಎಲ್.ಶ್ರೀನಿವಾಸಮೂರ್ತಿ, ವೇಮಗಲ್ ಸೋಮಶೇಖರ್, ರಶ್ಮಿ.ಎಸ್, ಆರ್.ಡಿ.ಪವಮಾನ, ಅ.ಲ.ನರಸಿಂಹನ್, ಹಂ.ಗು.ರಾಜೇಶ್, ಎಂ.ಎನ್.ಉಮೇಶ್ ಅವರ ಅಮೂಲ್ಯ ಲೇಖನಗಳ ಜೊತೆಗೆ ಬೆಂಗಳೂರು ಕುರಿತು ಈವರೆಗೂ ಪ್ರಕಟವಾಗಿರುವ ಕೃತಿಗಳ ವಿವರ ಮತ್ತು ಐತಿಹಾಸಿಕ ಚಿತ್ರಗಳ ಸಂಗ್ರಹವನ್ನು ಒಳಗೊಂಡಿದೆ. ಈ ಕೃತಿಯನ್ನು ಎಸ್.ಕೆ.ಅರುಣಿ ಅವರು ಸಂಪಾದಿಸಿದ್ದಾರೆ.

**೩. ಕರ್ನಾಟಕದಲ್ಲಿ ಪುರಾತತ್ತ್ವ ಅಧ್ಯಯನಗಳು.**

ಒಟ್ಟು ಪುಟಗಳು: ೧೭೬, ಬೆಲೆ: ರೂ. ೧೧೦/-

ಇದು ಕರ್ನಾಟಕದ ಪುರಾತತ್ತ್ವ ಅಧ್ಯಯನಗಳನ್ನು ಕುರಿತು ಸಂಕ್ಷಿಪ್ತ ಚಿತ್ರಣವನ್ನು ಕಟ್ಟಿಕೊಡುವ ಅಪರೂಪದ ಕೃತಿಯಾಗಿದೆ. ಈ ಕೃತಿಗೆ ನಾಡಿನ ಹಿರಿಯ ಮತ್ತು ಯುವ ಪುರಾತತ್ತ್ವ ತಜ್ಞರುಗಳಾದ- ಎಂ.ಎಸ್.ಕೃಷ್ಣಮೂರ್ತಿ, ಎಸ್.ನಾಗರಾಜು, ವಿ.ಶೋಭಾ, ಕೆ.ಜಿ.ಶಿವತಾರಕ್, ಎಚ್.ಎಂ.ಅನಿತಾ, ಲಿ.ನ.ಸ್ವಾಮಿ, ಸಿ.ಎಸ್.ವಾಸುದೇವನ್, ಜಗದೀಶ್ ಅವರುಗಳು ಕೊಡುಗೆ ನೀಡಿದ್ದಾರೆ. ಅಪೂರ್ವ ಛಾಯಾಚಿತ್ರಗಳನ್ನು ಒಂದೆಡೆ ಪ್ರತ್ಯೇಕವಾಗಿಯೇ ನೀಡಲಾಗಿದೆ. ಈ ಕೃತಿಯನ್ನು ಎಸ್.ಕೆ.ಅರುಣಿ ಮತ್ತು ಹಂ.ಗು.ರಾಜೇಶ್ ಸಂಪಾದಿಸಿದ್ದಾರೆ.

ಈ ಮೇಲಿನ ಬಿಡಿ ಕೃತಿಗಳು ಬೇಕಾದಲ್ಲಿ ಈ ಕೆಳಕಂಡ ವಿಳಾಸಕ್ಕೆ ಕೃತಿಯ ಮೊತ್ತದ ಜೊತೆಗೆ ರೂ.೨೦/- ಅಂಚೆವೆಚ್ಚ ಸೇರಿಸಿ, ಎಂ.ಓ /ಡಿ.ಡಿ ಯನ್ನು ತಮ್ಮ ವಿಳಾಸದ ಜೊತೆಗೆ ಕಳುಹಿಸಿಕೊಡಿ.

**ವಿಶೇಷ ಕೊಡುಗೆ: ರೂ.೨೫೦/- ಗಳಿಗೆ ಮೂರೂ ಕೃತಿಗಳನ್ನು ಕಳುಹಿಸಿಕೊಡಲಾಗುವುದು.**

**ವಿಳಾಸ: ಸಂಪಾದಕರು, 'ಇತಿಹಾಸ ದರ್ಪಣ', #೩೩ ಎ, ಐ.ಟಿ.ಐ ಕಾಲೇಜು ಹತ್ತಿರ, ಕೆಂಪೇಗೌಡನಗರ, ವಿಶ್ವನೀಡಂ - ಅಂಚೆ, ಬೆಂಗಳೂರು-೫೬೦೦೯೧. ಮೊ- ೭೮೨೯೪೦೪೦೬೩.**

■

# ಪುಸ್ತಕ ವಿಮರ್ಶೆ

## ಸಾರ್ಥಕ ಕೆಲಸ – ಕಲ್ಪಶೋಧ

–ಡಿ.ವಿ. ಪರಮಶಿವಮೂರ್ತಿ

ಇತ್ತೀಚೆಗೆ ಲೋಕಾರ್ಪಣೆಗೊಂಡ ಡಾ. ಡಿ.ಎನ್. ಯೋಗೀಶ್ವರಪ್ಪ ಅವರ 'ಕಲ್ಪಶೋಧ' ಅನೇಕ ದೃಷ್ಟಿಗಳಿಂದ ಇತಿಹಾಸ ಆಸಕ್ತರ ಗಮನ ಸೆಳೆಯುತ್ತದೆ. ಕ್ರಿಯಾಶೀಲ ವ್ಯಕ್ತಿತ್ವದ ಡಾ. ಡಿ.ಎನ್. ಯೋಗೀಶ್ವರಪ್ಪ ಅವರ ಈ ಕೃತಿ ಕಲ್ಪತರು ನಾಡೆಂದು ಪ್ರಸಿದ್ಧಿ ಪಡೆದ ತುಮಕೂರು ಜಿಲ್ಲೆಯ ಐತಿಹಾಸಿಕ ಸಂಗತಿಗಳನ್ನು ಚರ್ಚಿಸುವ ಮಹತ್ವದ ಸಂಶೋಧನಾ ಲೇಖನಗಳ ಸಂಕಲನವಾಗಿದೆ. ಈ ಕಾರಣದಿಂದ ಈ ಕೃತಿಗೆ ಇಟ್ಟಿರುವ ಕಲ್ಪಶೋಧವೆಂಬ ಹೆಸರು ಸಾರ್ಥಕವಾಗಿದೆ.

ಕಲ್ಪಶೋಧ ಕೃತಿಯ ಲೇಖನಗಳನ್ನು ನಾಲ್ಕು ಹೆಜ್ಜೆಗಳನ್ನಾಗಿ ವಿಂಗಡಿಸಿದ್ದು ಹೆಜ್ಜೆ ೧ ರಲ್ಲಿ ಹೊಯ್ಸಳ ಪ್ರತಿನಿಧಿಗಳನ್ನು ಕುರಿತಂತೆ ೬ ಲೇಖನಗಳು, ಹೆಜ್ಜೆ ೨ ರಲ್ಲಿ ಚರಿತ್ರೆ ಕಟ್ಟಿದ ಚಿಕ್ಕ ಅರಸರು ಎಂಬ ಭಾಗದಲ್ಲಿ ೧೫ ಲೇಖನಗಳು, ಹೆಜ್ಜೆ ೩ ರಲ್ಲಿ ಧರ್ಮಜಾಗೃತಿ ಹೆಸರಲ್ಲಿ ೬ ಲೇಖನಗಳು, ಹೆಜ್ಜೆ ೪ ರಲ್ಲಿ ಭಿನ್ನಕಥನ ಎಂಬ ಶೀರ್ಷಿಕೆಯಲ್ಲಿ ೧೧. ಹೀಗೆ ಒಟ್ಟು ೩೮ ಲೇಖನಗಳನ್ನೊಳಗೊಂಡ ಕೃತಿ ಇದಾಗಿದೆ.

ಹೆಜ್ಜೆ ೧ ರಲ್ಲಿ ಆರಂಭದ ಲೇಖನ "ತುಮಕೂರು ಜಿಲ್ಲೆಯ ಇತಿಹಾಸ – ಪಕ್ಷಿನೋಟ" ಎಂಬುದಾಗಿದ್ದು ಮೊದಲಿಗೆ ಈ ಲೇಖನ ಕೃತಿಯ ಪ್ರವೇಶಿಕೆಯಂತಿದೆ. ಅನ್ಯಕ್ಷೇತ್ರದವರಿಗೆ ಇದರಿಂದ ಕೃತಿಪ್ರವೇಶಕ್ಕೆ ಮತ್ತು ವಿಷಯಾಸಕ್ತಿಗೆ ಪ್ರೇರಣೆ ನೀಡಿದಂತಾಗಿದೆ. ತುಮಕೂರು ಜಿಲ್ಲೆಯ ಪೂರ್ವೇತಿಹಾಸ, ಪೌರಾಣಿಕ ಅಂಶಗಳು, ಆಳಿದ ರಾಜಮನೆತನಗಳು ಮತ್ತು ೧೯೪೭ರ ಮೈಸೂರು ಚಲೋ



**ಕೃತಿ – ಕಲ್ಪಶೋಧ**
**(ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳು)**
ಲೇ : ಡಾ. ಡಿ.ಎನ್. ಯೋಗೀಶ್ವರಪ್ಪ
ಪ್ರಕಟಣೆ – ಪ್ರಗತಿ ಗ್ರಾಫಿಕ್ಸ್, ಬೆಂಗಳೂರು
ಬೆಲೆ – ೪೦೦ ರೂ. ಪುಟ xii+೪೮೦
ಪ್ರಕಟಣಾ ವರ್ಷ – ೨೦೧೨

ಚಳುವಳಿಯವರೆಗೂ ಈ ಲೇಖನದಲ್ಲಿ ಚರ್ಚಿಸಿದ್ದಾರೆ. ಇದೇ ಭಾಗದಲ್ಲಿ ಹೊಯ್ಸಳ ಸಾಮಂತರನ್ನು ಕುರಿತು ೪ ಲೇಖನಗಳು ಮತ್ತು ಕ್ರಿಶ ೧೧೮೫ರ ಅವಧಿಯ ಅಜ್ಜನಹಳ್ಳಿಯ ಅಪ್ರಕಟಿತ ಶಾಸನವನ್ನು ಕುರಿತು ಚರ್ಚಿಸುವ ಲೇಖನವಿದೆ. ಕೈದಾಳದ ಮಹಾಸಾಮಂತ ಗೂಳಿಬಾಚಿದೇವನ ಬಗ್ಗೆ ಬರೆದಿರುವ ಲೇಖನ ಈವರೆಗೆ ದೊರೆತ ಎಲ್ಲ ಆಕರಗಳನ್ನೂ ಸಂಗ್ರಹಿಸಿ, ವಿಶ್ಲೇಷಿಸಿ ಬರೆದ ಲೇಖನವಾಗಿದೆ. ಗೂಳಿಬಾಚಿದೇವನ ಸಾಧನೆಯನ್ನು ಎತ್ತಿ ಹಿಡಿಯುವುದರೊಂದಿಗೆ, ಚರಿತ್ರೆಯ ಬರವಣಿಗೆಯ ಕ್ರಮದಲ್ಲಿ ಎಲೆಮರೆಯಂತಿದ್ದ ಸ್ಥಳೀಯ ಸಾಮಂತರನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನ ಶ್ಲಾಘನೀಯ. ಈ ರೀತಿಯ ಕೆಲಸ ಇನ್ನೂ ಹೆಚ್ಚಿನ ರೀತಿಯಲ್ಲಾಗಬೇಕಾಗಿದೆ. ನಮ್ಮ ಚರಿತ್ರೆಯನ್ನು ಪುನಾರಚಿಸಬೇಕು ಎಂಬ ಕೂಗು ಎಲ್ಲೆಡೆ ಇದೆ. ಆದರೆ ಹೇಗೆ, ಯಾವ ದಿಕ್ಕಿನಿಂದ ಈ ಕೆಲಸ ಪ್ರಾರಂಭಿಸಬೇಕೆಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಈ ಸಮಸ್ಯೆಗೆ ಉತ್ತರಿಸುವ ಪ್ರಯತ್ನವೇ ಈ ಲೇಖನವೆಂದು ಬೆಟ್ಟು ಮಾಡಿ ತೋರಿಸಬಹುದಾಗಿದೆ. ಇಂದಿಗೂ ನಮ್ಮ ಚರಿತ್ರೆಯ ಬೋಧನೆ ಪ್ರಭಾವಿಗಳನ್ನೇ ಕೇಂದ್ರೀಕರಿಸಿಕೊಂಡಿದೆ. ಪ್ರಮುಖ ರಾಜರ ಅಥವಾ ರಾಜವಂಶಗಳ ಅಡಿಯಲ್ಲಿಯೇ ಅಧ್ಯಯನ ಪ್ರವಹಿಸುತ್ತಿದೆ. ಜನರೊಂದಿಗೆ ನೇರ ಸಂಪರ್ಕದಲ್ಲಿದ್ದವರು ಗೂಳಿಬಾಚಿದೇವನಂತಹ ಸಾವಿರಾರು ಸಾಮಂತ ದೊರೆಗಳು, ಅಧಿಕಾರಿಗಳೇ ಹೊರತು ರಾಜರಾಗಲಿ ಅಥವಾ ಚಕ್ರವರ್ತಿಗಳಾಗಲೀ ಅಲ್ಲ. ಸ್ಥಳೀಯ ಅರಸರ ಅಧ್ಯಯನದಿಂದ ನಮ್ಮ ಚರಿತ್ರೆಯ, ಸಂಸ್ಕೃತಿಯ ಮೂಲಬೇರುಗಳನ್ನು ಹುಡುಕಲು ಸಾಧ್ಯ. ಇಂತಹ ಕೆಲಸ ಇತ್ತೀಚಿನ ದಿನಗಳಲ್ಲಿ ಪ್ರಾರಂಭವಾಗಿದ್ದು ಇನ್ನೂ ಹೆಚ್ಚಿನ ರೀತಿಯಲ್ಲಿ ನಡೆಯಬೇಕಾಗಿದೆ.

ಈ ಭಾಗದ ಮತ್ತೊಂದು ಮುಖ್ಯವಾದ ಲೇಖನ 'ಕೈದಾಳದ ದೇವಾಲಯಗಳು' ಎಂಬುದು. ಇದರಲ್ಲಿ ಸ್ಥಳೀಯ ಶಾಸನಗಳು, ಐತಿಹ್ಯಗಳು ಮತ್ತು ಕ್ಷೇತ್ರಕಾರ್ಯದ ಮಾಹಿತಿಗಳ ನೆರವಿನಿಂದ ಕೈದಾಳದಲ್ಲಿದ್ದ, ಈಗ ಇರುವ ಎಲ್ಲ ದೇವಾಲಯಗಳ ಬಗ್ಗೆ ಚರ್ಚಿಸಿರುವರು. ಇಷ್ಟೇ ಆಗಿದ್ದರೆ ಈ ಲೇಖನ ವಿಶೇಷವಾಗುತ್ತಿರಲಿಲ್ಲ. ಇತ್ತೀಚಿನ ವರ್ಷಗಳಲ್ಲಿ

ಹೆಸರಾಂತ ಚನ್ನಕೇಶವಮೂರ್ತಿಯು ಭಗ್ನವಾದ ಕಾರಣಗಳು ಮತ್ತು ಅದರ ಪರಿಣಾಮಗಳ ಬಗ್ಗೆಯೂ ಚರ್ಚಿಸುವ ಮೂಲಕ ಒಬ್ಬ ಇತಿಹಾಸಕಾರನಿಗೆ ಭೂತಕಾಲದ ಘಟನೆಗಳಷ್ಟೇ ಅಲ್ಲದೆ ವರ್ತಮಾನದ ಮತ್ತು ಭವಿಷ್ಯದ ದೃಷ್ಟಿಕೋನವೂ ಇರಬೇಕೆಂಬುದನ್ನು ಎತ್ತಿ ತೋರಿಸಿದ್ದಾರೆ. ಈ ಲೇಖನವು ಈವರೆಗಿನ ನಮ್ಮ ದೇಶದ ಭಗ್ನ ದೇವಾಲಯಗಳ ಮೂರ್ತಿಗಳ ಭಗ್ನಚರಿತೆಯ ಬಗ್ಗೆ ಹೊಸದಾಗಿ ಯೋಚಿಸಲು ಸ್ಫೂರ್ತಿ ನೀಡುತ್ತದೆ. ಈ ಭಾಗದಲ್ಲಿ ಜಿಳಿಗೆರೆ ಸಾಮಂತರು, ಶೆಟ್ಟಿಕೆರೆ ಸಾಮಂತರನ್ನು ಹಾಗೂ ಇತರೆ ಸಾಮಂತರನ್ನು ತಳಸ್ಪರ್ಶಿಯಾಗಿ ಅಧ್ಯಯನ ಮಾಡಲಾಗಿದೆ.

**ಹೆಜ್ಜೆ–೨** ರಲ್ಲಿ ೧೫ ಲೇಖನಗಳಿದ್ದು ಸ್ಥಳೀಯವಾಗಿ ಆಳ್ವಿಕೆ ನಡೆಸಿದ ವಿಜಯನಗರ ಮತ್ತು ನಂತರದವರನ್ನು ಕುರಿತ ಸಂಶೋಧನ ಲೇಖನಗಳಿವೆ. ಹಾಗಲವಾಡಿ, ನಿಡುಗಲ್ಲು, ಮಧುಗಿರಿ, ಬಿಜ್ಜಾವರ, ಮಿಡಿಗೇಶಿ, ಪಾವಗಡ, ಸಿರಾ, ಹೊಳವನಹಳ್ಳಿ, ಕೊರಟಗೆರೆ ಮುಂತಾದ ಪಾಳೆಯಗಾರರನ್ನು ಕುರಿತಂತೆ ಹೊಸ ಹೊಳೆವಿನ ಚರ್ಚೆಗಳಿವೆ. ಈ ಭಾಗದಲ್ಲಿ ತುಮಕೂರು ಜಿಲ್ಲೆಯ ಮಧ್ಯಕಾಲೀನಯುಗದ ಚರಿತ್ರೆಯನ್ನು ಬಿಡಿ–ಬಿಡಿ ಲೇಖನಗಳಲ್ಲಿ ಚರ್ಚಿಸಿದ್ದರೂ, ಒಟ್ಟಾಗಿ ಗ್ರಹಿಕೆಯಾಗುವಂತೆ ನಿರೂಪಿಸಲಾಗಿದೆ. ವಿಜಯನಗರಯುಗೀನ ಚರಿತ್ರೆ ನಮ್ಮ ಮುಂದಿರುವುದಕ್ಕಿಂತ ಹೆಚ್ಚು ನಮ್ಮ ಹಿಂದಿದೆ. ಅದನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಸಂಶೋಧಿಸಿ ಮುನ್ನೆಲೆಗೆ ತರಬೇಕಾಗಿದೆ. ಸಂಶೋಧಕರಿಗೆ ಇದು ದೊಡ್ಡ ಸವಾಲೂ ಆಗಿದೆ. ಇದಕ್ಕೆ ಕಾರಣ ಒಂದೆರಡಲ್ಲ! ಈ ಯುಗದಲ್ಲಿ ರಾಜಕೀಯದ ಜೊತೆ ಅನೇಕ ಧರ್ಮಗಳು, ಅನೇಕ ಭಾಷೆಗಳು, ಅನೇಕ ರಾಜವಂಶಗಳು, ಅನೇಕ ಭೂಪ್ರದೇಶಗಳು, ಅನೇಕ ಭಾಷೆಯ ಗೊಂದಲಮಯ ಆಕರಗಳು ಒಂದರೊಳಗೊಂದು ಬೆರೆತು ಸಿಕ್ಕು-ಸಿಕ್ಕಾಗಿ ಬಿಡಿಸಲು ಕಷ್ಟವಾಗುತ್ತಿದೆ. ಇದಕ್ಕೂ ಮಿಗಿಲಾಗಿ ವಿದ್ವಾಂಸರ ಪೂರ್ವಾಗ್ರಹ ತೀರ್ಮಾನಗಳೂ ಇನ್ನಷ್ಟು ಗೊಂದಲವನ್ನುಂಟುಮಾಡಿದೆ. ಈ ಚಕ್ರವ್ಯೂಹ ಭೇದಿಸುವ ಕೆಲಸ ಇನ್ನು ಮುಂದಾದರೂ ಸಮರ್ಪಕವಾಗಿ ನಡೆಯಬೇಕಾಗಿದೆ. ಈ ಕೆಲಸಕ್ಕೆ ಇಲ್ಲಿನ ಲೇಖನಗಳು ಕಿಂಚಿತ್ತಾದರೂ ಪ್ರೇರಣೆ ನೀಡಬಹುದೆಂದು ನನ್ನ ಅನಿಸಿಕೆಯಾಗಿದೆ.

**ಹೆಜ್ಜೆ ೩** ರಲ್ಲಿ ಧರ್ಮ ಜಾಗೃತಿ ತಲೆಬರಹದ ಅಡಿಯಲ್ಲಿ ೬ ಲೇಖನಗಳಿವೆ. ಜಿಲ್ಲೆಯ ವೀರಶೈವಧರ್ಮದ ಬೆಳವಣಿಗೆ, ಆಧುನಿಕ ತುಮಕೂರು ಜಿಲ್ಲೆಯ ಮೇಲೆ ದೊಡ್ಡ ಪ್ರಭಾವ ಬೀರಿರುವ ಸಿದ್ಧಗಂಗಾಮಠದ ಸ್ಥಾಪನೆಯ ಕಾಲದ ಮರುಪರಿಶೀಲನೆ, ಎಡೆಯೂರು ಮಠದ ವೀರಭದ್ರಮೂರ್ತಿ ಸ್ಥಾಪನೆಯ ಬಗ್ಗೆ, ಸಿದ್ಧಲಿಂಗಯತಿಗಳ ಕೊನೆಯ ದಿನಗಳು, ಅವರ ರೂಪಾಂತರಗೊಂಡ ಶಿಲ್ಪ ಲಕ್ಷಣ ಮುಂತಾದವು ಬಹಳ ಮಾಹಿತಿಪೂರ್ಣವಾಗಿವೆ. ಶ್ರೀ ಸಿದ್ಧಲಿಂಗಯತಿಗಳ ಸಮಕಾಲೀನ ಶಿಲ್ಪವು ಇದುವರೆಗೆ ಎಲ್ಲೂ ದೊರಕಿಲ್ಲ. ಈವರೆಗೆ ದೊರಕಿರುವುದೆಲ್ಲ ಅವರ ನಂತರದ ಕಾಲದವು. ಇತ್ತೀಚಿನ ವರ್ಷಗಳಲ್ಲಿ ಎಡೆಯೂರು ಸಮೀಪದ ಕಾಮಿಡಿಹಳ್ಳಿಯಲ್ಲಿ ದೊರೆತ ಕ್ರಿ.ಶ. ೧೫೨೧ ರ ಅವಧಿಯ ಶಾಸನದಲ್ಲಿ ಸಿದ್ಧಲಿಂಗಯತಿಗಳು ಅಂಗೈಯಲ್ಲಿ ಶಿವಲಿಂಗವನ್ನು ಹಿಡಿದು, ಧ್ಯಾನಮುದ್ರೆಯಲ್ಲಿ ಕುಳಿತ ಶಿಲ್ಪವಿದೆ. ಅವರ ಜೀವಿತಾವಧಿಯ ಪ್ರಥಮ ಶಾಸನವೂ ಇದಾಗಿದ್ದು ಅನೇಕ ಸಂಗತಿಗಳ ಮೇಲೆ ಹೊಸ ಬೆಳಕನ್ನು ಬೀರಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಪ್ರಸ್ತುತ ಕೃತಿಯಲ್ಲಿ ಒಂದು ಲೇಖನ ಜಿಲ್ಲೆಯ ಹೊಯ್ಸಳ ಅವಧಿಯ ಜೈನಧರ್ಮ ಮತ್ತು ಸ್ಮಾರಕಗಳನ್ನು ಕುರಿತದ್ದಾಗಿದ್ದು ಕೆಲವು ಹೊಸ ಅಂಶಗಳತ್ತ ದೃಷ್ಟಿ

ಹರಿಸಿವೆ. ಈ ಜಿಲ್ಲೆಯ ಜೈನ ಸಂಸ್ಕೃತಿಯ ಬಗ್ಗೆ ಬೆರಳೆಣಿಕೆಯಷ್ಟು ಸಂಶೋಧಕರು ಮಾತ್ರ ಕೆಲಸ ಮಾಡಿದ್ದಾರೆ. ಈ ವಿಷಯದ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗೆ ಅವಕಾಶವಿದೆ. ಜಿಲ್ಲೆಯ ಜೈನಧರ್ಮದ ಬೆಳವಣಿಗೆಗೆ ಸ್ತ್ರೀಯರದ್ದೇ ಸಿಂಹಪಾಲು. ಅದರಿಂದಲೇ ಪ್ರೇರಣೆ ಎಂದು ಅನೇಕ ಸಾಕ್ಷಿಗಳ ಆಧಾರದಿಂದ ಲೇಖಕರು ಸ್ಪಷ್ಟಪಡಿಸಿದ್ದಾರೆ. ಜೈನರು ಕರ್ನಾಟದಲ್ಲಿ ಆರಂಭದಿಂದಲೂ ಅಲ್ಪಸಂಖ್ಯಾತರೇ ಹೊರತು ಯಾವ ಕಾಲದಲ್ಲೂ ಬಹುಸಂಖ್ಯಾತರಾಗಿರಲಿಲ್ಲ. ಆದರೆ ಅವರ ಕೊಡುಗೆ ಬಹುಸಂಖ್ಯಾತರ ಕೊಡುಗೆಯನ್ನೂ ಮೀರಿದ್ದಾಗಿದೆ.

**ಹೆಜ್ಜೆ ೪** ರಲ್ಲಿ ಭಿನ್ನ ಕಥನವೆಂಬ ಶೀರ್ಷಿಕೆಯಲ್ಲಿ ೪ ಲೇಖನಗಳಿದ್ದು, ಹೆಸರೇ ಸೂಚಿಸುವಂತೆ ಮುಖ್ಯ ವರ್ಗೀಕರಣಕ್ಕೆ ಸಿಗದ ಲೇಖನಗಳನ್ನು ಈ ಭಾಗದಲ್ಲಿ ನೀಡಿದೆ. ತುಮಕೂರು ಜಿಲ್ಲೆಯ ಕೋಟೆಗಳು, ಶಾಸನೋಕ್ತ ಸ್ಥಳಗಳು, ಕೆರೆಗಳು, ಶೈಕ್ಷಣಿಕ ಪ್ರಗತಿ, ದೇವರಾಯನದುರ್ಗ, ಚಿಕ್ಕತೊಟ್ಟಿಲುಕೆರೆ ದೇವಾಲಯಗಳು, ಯರವಾಡ ಜೈಲಿನಲ್ಲಿನ ಮಧುಗಿರಿ ಬಾಲಕ, ಸ್ವಾತಂತ್ರ್ಯ ಚಳುವಳಿಯಲ್ಲಿ ವಿದ್ಯಾರ್ಥಿಗಳ ಪಾತ್ರ, ಜಿಲ್ಲಾಧಿಕಾರಿಗಳು, ಕುರುಬರ ಸಮಾಜ, ಹೀಗೆ ಬಹುಮುಖಿ ವಿಷಯಗಳನ್ನು ಈ ಭಾಗದಲ್ಲಿ ಚರ್ಚೆಗೆ ಒಡ್ಡಿದ್ದಾರೆ.

ಇಡೀ ಕೃತಿಯಲ್ಲಿ ಪ್ರಾಚೀನ ಚರಿತ್ರೆಯಿಂದ ಮೊದಲ್ಗೊಂಡು ಆಧುನಿಕ ಚರಿತ್ರೆಯವರೆಗೆ ಚರ್ಚಿಸಿರುವ ಲೇಖನಗಳಲ್ಲಿ ಸಂಶೋಧಕರ ಪರಿಶ್ರಮ ಮಡುಗಟ್ಟಿರುವುದು ಕಂಡುಬರುತ್ತದೆ. ಒಂದು ಜಿಲ್ಲೆಯನ್ನು ಕುರಿತು, ಬೇರೆ ಬೇರೆ ಮೂಲಗಳಲ್ಲಿ ಪ್ರಕಟವಾಗಿದ್ದ ಒಬ್ಬನೇ ಸಂಶೋಧಕನ ಲೇಖನಗಳ ಮೊತ್ತ ಮೊದಲ ಸಂಕಲನವೆಂಬ ಖ್ಯಾತಿ ಈ ಕಲ್ಪಶೋಧ ಕೃತಿಗೆ ಸಲ್ಲುತ್ತದೆ. ಬಿಡಿಬಿಡಿಯಾದ ಸಂಶೋಧನ ಲೇಖನಗಳ ಮೂಲಕ ಇಡೀ ಜಿಲ್ಲೆಯ ಇತಿಹಾಸವನ್ನು ಕಟ್ಟಿಕೊಡುವ, ಸಮಸ್ಯೆಗಳತ್ತ ಬೆಟ್ಟುಮಾಡಿರುವ ಸಮಗ್ರ ಪ್ರಯತ್ನ ಈ ಕೃತಿಯಲ್ಲಿದೆ. ಯಾವುದೇ ಪೂರ್ವಾಗ್ರಹಕ್ಕೆ ಒಳಗಾಗದೆ, ಆಕರನಿಷ್ಠವಾಗಿ ಚರ್ಚಿಸಿರುವ. ಇತಿಹಾಸವನ್ನಷ್ಟೇ ಅಲ್ಲದೆ, ಪುರಾತತ್ವ, ವಾಸ್ತುಶಾಸ್ತ್ರ, ಸಾಹಿತ್ಯ, ಐತಿಹ್ಯ ಹೀಗೆ ಬಹುಶಿಸ್ತುಗಳ ಮೂಲಕ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವ ಸ್ತುತ್ಯ ಕೆಲಸ ಇಲ್ಲಿ ನಡೆದಿದೆ. ಕೆಲ ಕಣ್ತಪ್ಪಿನ ದೋಷಗಳು ಇದ್ದರೂ ಸಹ ತನ್ನ ಪರಿಮಿತಿಯಲ್ಲಿ ಅನೇಕ ಸಾಧನೆಗಳನ್ನು ಮಾಡಿ ಜಿಲ್ಲೆಯ ಇತಿಹಾಸದ ಅಧ್ಯಯನಕ್ಕೆ ಹೊಸ ದಿಕ್ಕನ್ನು ತೋರಿಸಿರುವ ಡಾ. ಡಿ.ಎನ್. ಯೋಗೀಶ್ವರಪ್ಪ ಅವರ ಕಲ್ಪಶೋಧ ಗ್ರಂಥವು ಇತಿಹಾಸಕರು ಅವಶ್ಯವಾಗಿ ಗಮನಿಸಲೇಬೇಕಾದ ಗ್ರಂಥವಾಗಿ ರೂಪುಗೊಂಡಿದೆ.

■

# ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆ

–ಹಂ.ಗು. ರಾಜೇಶ್

**ಭಾ**ರತೀಯ ಇತಿಹಾಸ ಕ್ಷೇತ್ರದಲ್ಲಿ ಆಳವಾದ ಅರಿವನ್ನು ಹೊದಿದ್ದ ಡಾ.ಉಪೇಂದ್ರ ನಾಥ ಗೋಶಾಲ್ ಅವರು ಪ್ರಾಚೀನ ಭಾರತದ ಸಂಘ–ಸಂಸ್ಥೆಗಳು, ರಾಜಕೀಯ ಹಾಗೂ ಆರ್ಥಿಕ ವಿಚಾರಗಳ ಬಗೆಗೆ ಅಪಾರ ಕುತೂಹಲವುಳ್ಳವರಾಗಿದ್ದರು. ಇವುಗಳ ಬಗೆಗೆ ಸರಿಯಾದ ಅಧ್ಯಯನ ಕೈಗೊಳ್ಳಬೇಕಾದರೆ ಪ್ರಾಚೀನ ಸಾಹಿತ್ಯಗಳಲ್ಲಿ ಕಂಡುಬರುವ ಪಾರಿಭಾಷಿಕ ಶಬ್ದಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು ಎಂಬ ನಿಲುವು ತಳೆದವರಾಗಿದ್ದರು.

ಆದ್ದರಿಂದ ಗೋಶಾಲರು ಅದಕ್ಕಾಗಿ ವೈದಿಕ ಸಾಹಿತ್ಯಗಳು ಆದಿಯಾಗಿ ಹಲವು ಪ್ರಾಚೀನ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದರು. ವಸ್ತುನಿಷ್ಠ ಇತಿಹಾಸಕಾರನಂತೆ, ಪ್ರಾಚೀನ ಭಾರತದ ಸಾಮಾಜಿಕ, ಆರ್ಥಿಕ ಸಂಸ್ಥೆಗಳ ಮೂಲಭೂತ ಲಕ್ಷಣಗಳನ್ನು ನಿರೂಪಿಸುವ ದೃಷ್ಟಿಯಿಂದ ಸಾಹಿತ್ಯವನ್ನು ವಿಶ್ಲೇಷಿಸಿದರು. ಅವರ 'ಹಿಂದೂ ಕಂದಾಯ ವ್ಯವಸ್ಥೆ' ಕುರಿತಾದ ಮಹಾ ಪ್ರಬಂಧಕ್ಕೆ ೧೯೨೨ರಲ್ಲಿ ಕಲ್ಕತ್ತಾ ವಿ.ವಿ. ಪಿ.ಹೆಚ್.ಡಿ. ಪದವಿ ನೀಡಿ ಗೌರವಿಸಿತು. ಈ ಮಹಾ ಪ್ರಬಂಧವನ್ನು 'Contribution to the History of Hindu Revenue System' ಎಂಬ ಶೀರ್ಷಿಕೆಯಲ್ಲಿ ೧೯೨೯ರಲ್ಲಿ ಅದೇ ವಿಶ್ವವಿದ್ಯಾಲಯವೇ ಪ್ರಕಟಿಸಿತು. ಪ್ರಾಚೀನ ಕಂದಾಯ ವ್ಯವಸ್ಥೆಯನ್ನು ಕುರಿತಾದ ಆರಂಭಿಕ ಸಂಶೋಧನೆ ಇದಾದ್ದರಿಂದ ಮುಂದಿನ ಸಂಶೋಧಕರಿಗೆ ಈ ಕೃತಿ ಹೊಸ ಮಾರ್ಗವನ್ನು ತೆರೆದಿಟ್ಟಿತು. ಅಪಾರ ಬೇಡಿಕೆ ಇದ್ದ ಕೃತಿಯು ಮತ್ತೆ ಪ್ರಕಟಗೊಂಡಿದ್ದು ೪೦ ವರ್ಷಗಳ ನಂತರ.

ಗೋಶಾಲರು ತಮ್ಮ ಕೊನೆಯ ದಿನಗಳಲ್ಲಿ ಅಂದರೆ ೧೯೬೯ರ ಮಾರ್ಚ್ ತಿಂಗಳಲ್ಲಿ ತಮ್ಮ ಶಿಷ್ಯ ಎಸ್.ಕೆ. ಮಿತ್ರ ಅವರೊಂದಿಗೆ ಚರ್ಚಿಸುತ್ತಿದ್ದಾಗ, ಮಿತ್ರ ಅವರು 'Hindu Revenue System' ಕೃತಿಯನ್ನು ಏಕೆ ಮತ್ತೆ ಪರಿಷ್ಕರಿಸಿ ಪ್ರಕಟಿಸಬಾರದು? ಎಂಬ ಪ್ರಶ್ನಿಸಿದಾಗ, ನನಗೆ ವಯಸ್ಸು ಸ್ಪಂದಿಸುತ್ತಿಲ್ಲ, ಆ ಕೆಲಸವನ್ನು ತಾವೇ ಮಾಡಿ ಎಂದು ಅನುಮತಿ ನೀಡಿದರು. ಅದಾದ ನಾಲ್ಕೆ ತಿಂಗಳಲ್ಲಿ ಅಂದರೆ ೧೫ ಜುಲೈ, ೧೯೬೯ರಂದು ಗೋಶಾಲರು ನಿಧನರಾದರು.

ನಂತರ ಮಿತ್ರ ಅವರು ಪಾರಿಭಾಷಿಕ ಪದಕೋಶವನ್ನು ಪರಿಷ್ಕರಿಸಿದರು. ಪ್ರತಿಪದದ ಟಿಪ್ಪಣಿಯಲ್ಲಿ ಇತ್ತೀಚಿನ ಅಧ್ಯಯನಗಳನ್ನು ಹಾಗೂ ಬೇರೆ, ಬೇರೆ ವಿದ್ವಾಂಸರುಗಳು ಮಂಡಿಸಿದ ವಿವರಣೆಗಳನ್ನು ಅಳವಡಿಸಿದರು. ಹೀಗೆ ಪರಿಷ್ಕರಿಸಿದ ಕೃತಿಯೇ 'Contribution to the History of Hindu Revenue System'. ಇದನ್ನು ಕಲ್ಕತ್ತಾದ ಪ್ರಸಿದ್ಧ ಪ್ರಕಾಶನ ಸಂಸ್ಥೆಯಾದ 'ಸಾರಸ್ವತ'ವು ೧೯೭೨ರಲ್ಲಿ ಪ್ರಕಟಿಸಿತು. ಉತ್ತಮ ಕೃತಿಗಳನ್ನು ಪ್ರಾದೇಶಿಕ ಭಾಷೆಗಳಿಗೂ ಅನುವಾದಿಸಬೇಕೆಂಬ ಐ.ಸಿ.ಎಚ್.ಆರ್.ನ ಮಹತ್ವದ ಯೋಜನೆಯಡಿ ಗೋಶಾಲರ ಈ ಕೃತಿಯನ್ನು ಜಯವಂತ ಕುಳ್ಳಿ ಅವರು 'ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆ' ಹೆಸರಿನಲ್ಲಿ ಕನ್ನಡಕ್ಕೆ ತಂದಿದ್ದಾರೆ. ಈ ಕೃತಿಯಲ್ಲಿ ಮೌರ್ಯರಿಂದ ರಜಪೂತರ ಕಾಲಘಟ್ಟದವರೆಗಿನ ಬಹುತೇಕ ಹಿಂದೂ ರಾಜ ಮನೆತನಗಳ ಕಂದಾಯ ವ್ಯವಸ್ಥೆಯನ್ನಷ್ಟೇ ಚರ್ಚಿಸಿದ್ದಾರೆ.

ಕೃತಿಯು ನಾಲ್ಕು ಭಾಗಗಳಲ್ಲಿ ೧೫ ಅಧ್ಯಾಯಗಳಷ್ಟು ಹರವನ್ನು ಒಳಗೊಂಡಿದೆ. ಇವಲ್ಲದೆ ಕೃತಿಯ ಕೊನೆಯ ಭಾಗದಲ್ಲಿ ಅನುಬಂಧ ರೂಪದ ೩ ಅಧ್ಯಾಯಗಳನ್ನು ಕಾಣಬಹುದು. ಇವುಗಳನ್ನು ಎಸ್.ಕೆ.ಮಿತ್ರ ಅವರು ಪರಿಷ್ಕತ ಆವೃತ್ತಿಯಲ್ಲಿ ಸಂಕಲಿಸಿದ್ದಾರೆ.

**ಭಾಗ–೧**

ಕೃತಿಯು ಮೊದಲ ಭಾಗದಲ್ಲಿ ವೇದ ಕಾಲದ ಕಂದಾಯ ವ್ಯವಸ್ಥೆಯ ಬಗ್ಗೆ ಚರ್ಚಿಸಿದ್ದು, ಮೊದಲ ತೆರಿಗೆ/ ಕಂದಾಯವಾದ 'ಬಲಿ'ಯನ್ನು ಅರ್ಥೈಸುವ ಪ್ರಯತ್ನ ಮಾಡಿದ್ದಾರೆ. ಕಾಲಾನಂತರ ಬಲಿಯ ಸ್ವರೂಪದಲ್ಲಿ ಕಂಡುಬರುವ ಬದಲಾವಣೆಗಳನ್ನು ವೈದಿಕ ಸಾಹಿತ್ಯಗಳ ಮೂಲಕವೇ ಗುರುತಿಸುತ್ತಾ ಹೋಗುತ್ತಾರೆ. ಇದು ಆರಂಭದಲ್ಲಿ ರಾಜನಿಗೆ ಪ್ರಜೆಗಳು ಕೊಡಬೇಕಾದ ಕಡ್ಡಾಯ ವಂತಿಗೆಯಾಗುತ್ತದೆ. ನಂತರ ರಾಜನು ತನ್ನ ಪ್ರಜೆಗಳಿಂದ ನಿಯಮಿತವಾಗಿ ಸಂಗ್ರಹಿಸುವ ಕರವಾಗುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

**ಭಾಗ–೨**

ಕೃತಿಯ ಎರಡನೇ ಭಾಗದಲ್ಲಿ ಒಟ್ಟು ೮ ಅಧ್ಯಾಯಗಳಿವೆ. ಆರಂಭದಲ್ಲಿ ಗಮನಿಸಬಹುದಾದ ಪ್ರಮುಖ ಅಂಶವೆಂದರೆ ಕೋಶ / ಬೊಕ್ಕಸದ ಮಹತ್ವ. 'ನೀತಿವಾಕ್ಯಮೃತಂ' ಕೃತಿಯಲ್ಲಿ "ರಾಜನ ಅಸ್ತಿತ್ವ ಅಡಗಿರುವುದು ಕೋಶದಲ್ಲಿಯೇ ಹೊರತು ಅವನ ಪ್ರಾಣದಲ್ಲಿಲ್ಲ" ಎಂದು ಹೇಳುತ್ತದೆ. ಮುಂದೆ ಹೇಳುತ್ತಾ ಕೋಶದಿಂದ ರಾಜ ಏನನ್ನು ಬೇಕಾದರೂ ಸಾಧಿಸಬಲ್ಲ ಎಂಬ ರೀತಿಯ ರಾಜಕೀಯ ಚಿಂತಕರ ಅಭಿಪ್ರಾಯಗಳನ್ನು ದಾಖಲಿಸುತ್ತಾರೆ. ಕೋಶ ಎಂದರೆ ಹಣ. ಆದ್ದರಿಂದ ಈ ಮಾತು




ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆ
ಮೂಲ: ಯು.ಎಸ್.ಗೋಶಾಲ್.
ಕನ್ನಡಕ್ಕೆ: ಜಯವಂತ ಕುಳ್ಳಿ.
ಪುಟಗಳು: ೩೦೦, ವರ್ಷ: ೨೦೧೨,
ಬೆಲೆ:೧೫೦/-
ಪ್ರಕಾಶಕರು: ಮುದ್ದುಶ್ರೀ ಗ್ರಂಥಮಾಲೆ,
ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್ –
ಕೃಷ್ಣಾಪುರದೊಡ್ಡಿ,
# ೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ,
ಹಂಪಿನಗರ, ಬೆಂಗಳೂರು–೫೬೦ ೧೦೪.

ಇಂದಿನ ರಾಜಕಾರಣಕ್ಕೂ ಸರಿಹೊಂದುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು. ಇಂದು ಹಣ ಇದ್ದರೆ ಯಾವ ರಾಜಕೀಯ ಸ್ಥಾನಮಾನವನ್ನಾದರೂ ಪಡೆಯಬಹುದಾದ ಪರಿಸ್ಥಿತಿಯನ್ನು ಕಾಣುತ್ತಿದ್ದೇವೆ. ಅಷ್ಟರ ಮಟ್ಟಿಗೆ ಸಮಕಾಲೀನ ಸಮಾಜ ಮತ್ತು ರಾಜಕರಣಕ್ಕೂ ಈ ಕೃತಿಯು ಕನ್ನಡಿಯಾಗಿದೆ ಎಂದು ಹೇಳಬಹುದು.

ಇದೇ ಭಾಗದಲ್ಲಿ ಜನತೆಯ ಮೇಲೆ ವಿದಿಸುವ ಕರಗಳು ಹೇಗಿರಬೇಕು ಎಂಬುದನ್ನು ಒಳ್ಳೆಯ ಉಪಮೆ ಮತ್ತು ರೂಪಕಗಳ ಮೂಲಕ ಅಭಿಪ್ರಾಯವನ್ನು ಸಂಗ್ರಹಿಸಿದ್ದಾರೆ. ಉದಾ: "ರಾಜನು ಹೂವನ್ನು ಕೀಳದೆ, ಮಕರಂದ ಹೀರುವ ದುಂಬಿಯಂತಿರಬೇಕು" "ಹಾಲು ಬೇಕಾದ ವ್ಯಕ್ತಿ ಕರುವಿಗೂ ಸ್ವಲ್ಪ ಹಾಲನ್ನು ಉಳಿಸಿ, ಕೆಚ್ಚಲನ್ನು ಕೊಯ್ಯದೆ ಹಾಲನ್ನು ತೆಗೆದುಕೊಳ್ಳಬೇಕು" ಎಂಬ ಮಾತುಗಳು ಹೆಚ್ಚು ಅರ್ಥ ಪೂರ್ಣವಾಗಿವೆ.

ಇದೆ ಭಾಗದಲ್ಲಿ ಕೌಟಿಲ್ಯ, ಶುಕ್ರಚಾರ್ಯ ಮೊದಲಾದ ಪ್ರಾಚೀನ ರಾಜಕೀಯ ಚಿಂತಕರು ತಿಳಿಸಿರುವ ವಿವಿಧ ಕಂದಾಯ, ಭೂಕಂದಾಯ ಮತ್ತಿತರ ಮೂಲಗಳ ಬಗೆಗೆ ವಿವರವಾಗಿ ಚರ್ಚಿಸಿದ್ದಾರೆ. ಸೀತಾ, ಭಾಗ, ಬಲಿ, ಕರ ಮೊದಲಾದ ತೆರಿಗೆಗಳನ್ನು ಯಾವುದರ ಮೇಲೆ ವಿಧಿಸಲಾಗುತ್ತಿತ್ತು? ಎಷ್ಟೆಷ್ಟು ವಿಧಿಸಲಾಗುತ್ತಿತ್ತು? ಕಾಲಘಟ್ಟದಲ್ಲಿ ಬದಲಾದ ಸ್ವರೂಪ ಎಲ್ಲವನ್ನು ಕಟ್ಟಿಕೊಟ್ಟಿದ್ದಾರೆ. ಅದಕ್ಕಾಗಿ ಸಾಹಿತ್ಯದಲ್ಲಿ ಬರುವ ಈ ಪರಿಭಾಷೆಗಳನ್ನು context ಗಳ ಮೂಲಕ ಅರ್ಥಮಾಡಿಕೊಂಡು, ಬೇರೆ, ಬೇರೆ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನು ಪರಿಶೀಲಿಸಿ ಒಂದು ನಿಯಿತಾರ್ಥಕ್ಕೆ ಗೋಶಾಲರು ಬಂದಿರುವುದನ್ನು ಈ ಕೃತಿಯಲ್ಲಿ ಕಾಣಬಹುದು. ಉದಾ: 'ಹಿರಣ್ಯ' ಎಂದರೆ ನಾವೆಲ್ಲ ಸಾಮಾನ್ಯವಾಗಿ ಚಿನ್ನದ ನಾಣ್ಯ ಎಂದು ಭಾವಿಸುತ್ತೇವೆ. ಆದರೆ ಹಿರಣ್ಯ ಎಂದರೆ ರಾಜ್ಯದ ಧಾನ್ಯ ಸ್ವರೂಪದ ಕರ ಎಂಬ ತೀರ್ಮಾನಕ್ಕೆ ಬರುವುದನ್ನು ಕಾಣಬಹುದು.

ಬೆಲೆನಿಯಂತ್ರಣ ಎಂದರೆ ನಮಗೆ ಸಾಮಾನ್ಯವಾಗಿ ನೆನಪಿಗೆ ಬರುವುದು ಅಲ್ಲಾವುದ್ದೀನ್ ಖಿಲ್ಜಿ. ಆದರೆ ಗೋಶಾಲರು 'ಕಂದಾಯ ಮೂಲಗಳು' ಅಧ್ಯಾಯದಲ್ಲಿ

ಬೆಲೆ ನಿಯಂತ್ರಣ ಮಾರುಕಟ್ಟೆಯ ಸ್ವರೂಪದ ವಿಚಾರಗಳನ್ನು ಅರ್ಥಶಾಸ್ತ್ರದಲ್ಲಿಯೇ ಇರುವುದನ್ನು ತೋರಿಸಿಕೊಟ್ಟಿದ್ದಾರೆ. ಮುಂದುವರೆದು ತುರ್ತುಕಂದಾಯ, ಕರಮುಕ್ತ ವರ್ಗಗಳು ಮತ್ತು ಆಸ್ತಿಗಳು ಹಾಗೂ ಕಂದಾಯ ಆಡಳಿತದ ಬಗ್ಗೆ ಚರ್ಚಿಸಿರುವುದನ್ನು ಕಾಣಬಹುದು. ಇಲ್ಲಿ ಬರುವ ಕರಮುಕ್ತವರ್ಗದಲ್ಲಿ ಬ್ರಾಹ್ಮಣರು, ಸನ್ಯಾಸಿಗಳು, ಮಕ್ಕಳು, ವೃದ್ಧರು, ಗರ್ಭವತಿಯರು, ಬಾಣಂತಿಯರು, ತವರಿಗೆ ಬಂದ ವಿಧವೆಯರು, ತರುಣ ವಿದ್ಯಾರ್ಥಿಗಳು, ಅಸಹಾಯಕರು ಮೊದಲಾದವರನ್ನು ಪ್ರಾಚೀನ ರಾಜಕೀಯ ಚಿಂತಕರಾದ ವಸಿಷ್ಟ, ಮನು, ಯಾಜ್ಞವಲ್ಕ್ಯ ಮೊದಲಾದವರು ಪಟ್ಟಿಮಾಡಿರುವುದನ್ನು ಗಮನಿಸಬಹುದು. ಕಂದಾಯ ಆಡಳಿತದ ಅಧ್ಯಾಯದಲ್ಲಿ ಸಮಹರ್ತಾ ಮತ್ತು ಸನ್ನಿದಾತ ಮೊದಲಾದ ಅಧಿಕಾರಿಗಳ ಕರ್ತವ್ಯಗಳನ್ನು ಪಟ್ಟಿಮಾಡಿರುವುದನ್ನು ಕಾಣಬಹುದು.

**ಭಾಗ-೩**

ಇದರಲ್ಲಿ ೫ ಅಧ್ಯಾಯಗಳಿವೆ. ಇಲ್ಲಿ ಕ್ರಿ.ಪೂ.೩೦೦ ರಿಂದ ಕ್ರಿ.ಶ.೧೨೦೦ ರವರೆಗಿನ ಉತ್ತರ ಭಾರತದ ಕಂದಾಯ ವ್ಯವಸ್ಥೆಯ ಇತಿಹಾಸವನ್ನು ವಿವರಿಸಿದ್ದಾರೆ.

ಮೊದಲ ಅಧ್ಯಾಯದಲ್ಲಿ ಮೆಗಸ್ತನೀಸನ ಇಂಡಿಕಾ ಕೃತಿಯ ನೆರವಿನಿಂದ ಮೌರ್ಯರ ಕಾಲದ ಭೂ ಕಂದಾಯ ವ್ಯವಸ್ಥೆಯನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಇಂಡಿಕಾ ಕೃತಿ ಮೂಲದಲ್ಲಿ ಲಭ್ಯವಿಲ್ಲದ ಕಾರಣ ಡಿಯೋಡೋರಸ್, ಸ್ಟ್ರಾಬೋ, ಅರಿಯನ್ ಅವರುಗಳು ತಮ್ಮ ಕೃತಿಯಲ್ಲಿ ಉಲ್ಲೇಖಿಸಿರುವ ಇಂಡಿಕಾ ಕೃತಿಯ ವಿಚಾರಗಳನ್ನು ಎರವಲು ಪಡೆದು ಅಧ್ಯಯನ ನಡೆಸಿರುವುದು ಒಂದು ಪ್ರಮುಖ ಅಂಶವಾಗಿದೆ.

೨ನೆಯ ಅಧ್ಯಾಯವು ಸಿಥಿಯನ್ನರ ಕಾಲದ ಕಂದಾಯ ವ್ಯವಸ್ಥೆಯ ಬಗ್ಗೆ ತಿಳಿಸಿಕೊಡುತ್ತದೆ. ಸಂಸ್ಕೃತದ ಮೊದಲ ಶಾಸನವಾದ ರುದ್ರದಾಮನ ಗಿರ್‌ನಾರ್ ಶಾಸನದಲ್ಲಿ ಸುದರ್ಶನ ಸರೋವರವನ್ನು ರಿಪೇರಿ ಮಾಡಿದ ಬಗ್ಗೆ ತಿಳಿಸುತ್ತದೆ. ಈ ಶಾಸನದಲ್ಲಿ ಉಲ್ಲೇಖಗೊಂಡಿರುವ ಶುಲ್ಕ, ವಿಷ್ಟಿ, ಪ್ರಣಯ ಮೊದಲಾದ ತೆರಿಗೆಗಳನ್ನು ಕುರಿತು ಚರ್ಚೆ ನಡೆಸಿದ್ದಾರೆ.

೩ನೆಯ ಅಧ್ಯಾಯದಲ್ಲಿ ಗುಪ್ತರ ಕಾ:ಲದ ಆರ್ಥಿಕ ವ್ಯವಸ್ಥೆ, ಕಂದಾಯ ಪದ್ಧತಿಗಳನ್ನು ಫಾಹಿಯಾನ್‌ನ ಬರಹ, ಶಾಸನಗಳು ಮತ್ತು ನಾಣ್ಯಗಳು ಮೊದಲಾದ ಪ್ರಾಥಮಿಕ ಆಕರಗಳ ಹಿನ್ನೆಲೆಯಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಉದ್ರಂಗ, ಉಪರಿಕರ ಎಂಬ ಕಂದಾಯಗಳ ಮೂಲದ ಬಗ್ಗೆಯೂ ವಿಶ್ಲೇಷಿಸಿದ್ದಾರೆ.

೩ನೆಯ ಭಾಗದ ೪ನೆಯ ಅಧ್ಯಾಯದಲ್ಲಿ ಕನೋಜಿನ ಹರ್ಷವರ್ಧನನ ಕಾಲದ ದತ್ತಿ, ವೃತ್ತಿ, ಕಂದಾಯ ಮೊದಲಾದವುಗಳ ಬಗ್ಗೆ ಚರ್ಚಿಸಿದ್ದಾರೆ. ಇಲ್ಲಿಯೂ ಹ್ಯೂ-ಯನ್-ತ್ಸಾಂಗನ ಬರವಣಿಗೆ ಮತ್ತು ಶಾಸನಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

೩ನೆಯ ಭಾಗದ ಕೊನೆಯ ಅಧ್ಯಾಯದಲ್ಲಿ ರಜಪೂತರ ಕಾಲದ ಕಂದಾಯ ವ್ಯವಸ್ಥೆಯನ್ನು ಚರ್ಚಿಸಿದ್ದಾರೆ. ಇಲ್ಲಿಯೂ ಶಾಸನಗಳನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಭಾಗಭೋಗ, ಹಿರಣ್ಯದಾನ, ಉದ್ರಂಗ, ಉಪರಿಕರ, ಜೋಲ್ಲಕ ಮೊದಲಾದ ಕರಗಳನ್ನು ಚರ್ಚಿಸಿದ್ದಾರೆ. 'ದಾರದ್ಧಣಕ' ಎಂಬ ಕಂದಾಯದ ಹೊಸ ಪದವು ಈ ರಜಪೂತರ ಕಾಲದಲ್ಲಿ ಕಾಣಿಸಿಕೊಳ್ಳಲಿದ್ದು, ಇದು ಫ್ಲೀಟರ ಪ್ರಕಾರ ಕೃಷಿ/ ವಿವಾದಕರವಾಗಿದೆ.

ಹೀಗೆ ಗೋಶಾಲರು ಪ್ರತಿಯೊಂದು ಪರಿಭಾಷೆಯ ಬಗ್ಗೆ ಹಿಂದಿನ ವ್ಯಾಖ್ಯಾನಕಾರರು ನೀಡಿರುವ ಅರ್ಥ, ಆಧುನಿಕ ಚರಿತ್ರಕಾರರು ಆಥೈಸಿರುವ ವಿಧಾನಗಳೆಲ್ಲವನ್ನೂ ಪರಿಶೀಲಿಸಿ, ಪರಿಗಣಿಸಿ ಅಂತಿಮ ತಿರ್ಮಾನಕ್ಕೆ ಬಂದಿರುವುದನ್ನು ಕಾಣಬಹುದು.

ಕೊನೆಯ ಭಾಗ ಉಪಸಂಹಾರವಾಗಿದೆ. ಇಲ್ಲಿ ಇಡೀ ಕೃತಿಯನ್ನು ಸಿಂಹಾವಲೋಕನ ಮಾಡುತ್ತಾ ತಮ್ಮದೇಯಾದ ಕೆಲವು ತೀರ್ಮಾನಗಳಿಗೆ ಬಂದಿರುವುದನ್ನು ಕಾಣಬಹುದು.

ಇನ್ನು ಮಿತ್ರ ಅವರು ಕೃತಿಯ ಪರಿಷ್ಕರಣೆ ಮಾಡುವಾಗ ಕೃತಿಯ ಕೊನೆಯಲ್ಲಿ ೩ ಅಮೂಲ್ಯವಾದ ಅನುಬಂಧಗಳನ್ನು ಸಂಕಲಿಸಿ ಕೊಟ್ಟಿದ್ದಾರೆ.

೧. ಹಣಕಾಸು ಮತ್ತು ಪಾರಿಭಾಷಿಕ ಅರ್ಥಕೋಶ– ಇದು ಪ್ರಾಚೀನ ಕಂದಾಯ ವ್ಯವಸ್ಥೆಯ ಬಗ್ಗೆ ಅಧ್ಯಯನ ಮಾಡುವ ಆಸಕ್ತರಿಗೆ ಅಮೂಲ್ಯವಾದ ಮಾಹಿತಿ ಕೋಶವಾಗಿದೆ.

೨. ಪದಕೋಶ: ಇಂಗ್ಲಿಷ್ ಪದಗಳಿಗೆ ಸಮಾನಾಂತರ ಕನ್ನಡ ಅರ್ಥಗಳನ್ನು ಕೊಟ್ಟಿದ್ದಾರೆ.

೩. ಸಂದರ್ಭಕೋಶ: ಅಕಾರಾಧಿಯಲ್ಲಿರುವ ಈ ಕೋಶದಲ್ಲಿ ಹಲವು ಪಾರಿಭಾಷಿಕ ಶಬ್ದಗಳನ್ನು ಪಟ್ಟಿಮಾಡಿದ್ದಾರೆ.

ಇಷ್ಟಾದರೂ ಈ ಕೃತಿಯ ಕೆಲವು ಮಿತಿಗಳನ್ನು ಹೇಳಲೇ ಬೇಕು. ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆಯಾಗಿದ್ದರೂ ಇದು ಕೇವಲ ಉತ್ತರ ಭಾರತದ ಚರಿತ್ರೆಗೆ ಅಷ್ಟೇ ಸೀಮಿತವಾಗಿದೆ. ದಕ್ಷಿಣ ಭಾರತದ ರಾಜ ಮನೆತನಗಳ ಬಗೆಗಾಗಲಿ, ಕಂದಾಯ ವ್ಯವಸ್ಥೆ ಬಗೆಗಾಗಲಿ ಯಾವುದೇ ಪ್ರಸ್ತಾಪವಿರುವುದಿಲ್ಲ.

–ಉಳಿದಂತೆ ಕೃತಿಯಲ್ಲಿ ಕೆಲವು ತಾಂತ್ರಿಕ ದೋಷಗಳು ನುಸುಳಿವೆ.

–ಪ್ರತಿಅಧ್ಯಾಯಕ್ಕೂ ಸಂಖ್ಯೆಗಳನ್ನು ಸರಿಯಾಗಿ ನೀಡಿಲ್ಲದಿರುವುದು ಓದುಗರಿಗೆ ಗೊಂದಲವನ್ನುಂಟು ಮಾಡುತ್ತದೆ.

– ಶಬ್ದಗಳನ್ನು ಪ್ರಯೋಗಿಸುವಾಗ ಹೆಚ್ಚು ಬಳಕೆಯಲ್ಲಿರುವ ಚಿರಪರಿಚಿತ ಪದಗಳಿಗೆ ಆದ್ಯತೆ ನೀಡಬೇಕಿದೆ.

– ಅಲ್ಲಲ್ಲಿ ಕುರುಡು ಮುದ್ರಾರಾಕ್ಷಸ (ಕರಡುದೋಷಗಳು) ಡಾಳಾಗಿ ಕಾಣುತ್ತದೆ. ಉದಾ: ಪ್ರಸ್ತಾವನೆಯ ಮೊದಲ ಪದವೇ ಕೌಂಡಿನ್ಯನ ಅರ್ಥಶಾಸ್ತ್ರ ಎಂದಿದೆ. ಕೌಟಿಲ್ಯ ಕಣ್ಮರೆಯಾಗಿದ್ದಾನೆ.

ಹೀಗೆ ಕೆಲವು ಇತಿಮಿತಿಗಳಿದ್ದು, ಅನುವಾದದ ಕಾರ್ಯ ಎಂದರೆ ಅಷ್ಟು ಸಲೀಸು ಕೆಲಸವಲ್ಲ. ಕೃತಿಯ ಬರವಣಿಗೆಯಷ್ಟೇ ಶ್ರಮ, ಶ್ರದ್ಧೆ ಅನುವಾದಕ್ಕೂ ಬೇಕಾಗುತ್ತದೆ ಎಂಬುದನ್ನು ಅನುವಾದಕರು ಮನಗಾಣಬೇಕಿದೆ. ಹೀಗೆ ಕೆಲವು ಇತಿಮಿತಿಗಳ ನಡುವೆಯೂ ಕೃತಿಯ out put ಸೊಗಸಾಗಿದೆ. ಮುಂದಿನ ಮುದ್ರಣಕ್ಕೆ ಮುನ್ನ ಪರಿಷ್ಕರಣೆಗೊಂಡರೆ ಹೆಚ್ಚು ಉಪಯುಕ್ತವಾಗಬಲ್ಲದು. ■

# ಸಂಚಿಕೆಯ ಲೇಖಕರ ವಿಳಾಸ

- **ಡಾ. ಎಸ್.ಕೆ. ಅರುಣಿ**
  ಉಪ ನಿರ್ದೇಶಕರು
  ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತು
  ಓಲ್ಡ್ ಲಾ ಕಾಲೇಜ್ ಬಿಲ್ಡಿಂಗ್, ಅರಮನೆ ರಸ್ತೆ
  ಬೆಂಗಳೂರು-೫೬೦೦೦೯

- **ಡಾ. ಮನು ವಿ. ದೇವದೇವನ್**
  ಸಹಾಯಕ ಪ್ರಾಧ್ಯಾಪಕರು
  ಮಾನವಿಕ ಹಾಗೂ ಸಮಾಜ ವಿಭಾಗ
  ಐ.ಐ.ಟಿ. ಮಂಡಿ, ಮಂಡಿ,
  ಹಿಮಾಚಲ ಪ್ರದೇಶ

- **ಡಾ. ಡಿ.ಎನ್. ಯೋಗೀಶ್ವರಪ್ಪ**
  ಸಹ ಪ್ರಾಧ್ಯಾಪಕರು
  ಸಿದ್ಧಗಂಗಾ ಮಹಿಳಾ ಕಾಲೇಜು
  ತುಮಕೂರು.

- **ಹಂ.ಗು. ರಾಜೇಶ್**
  # ೩೩ ಎ, ಐ.ಟಿ.ಐ ಕಾಲೇಜು ಹತ್ತಿರ,
  ಕೆಂಪೇಗೌಡನಗರ, ವಿಶ್ವನೀಡಂ – ಅಂಚೆ
  ಬೆಂಗಳೂರು-೫೬೦೦೯೧.

- **ಡಾ. ದೇವರಕೊಂಡಾರೆಡ್ಡಿ**
  ನಿವೃತ್ತ ಪ್ರಾಧ್ಯಾಪಕರು (ಶಾಸನಶಾಸ್ತ್ರ),
  ೩೫/೧, ೨೦ 'ಎ' ಮುಖ್ಯರಸ್ತೆ,
  ವೆಂಕಟೇಶ್ವರ ಲೇಔಟ್, ಬಿಟಿಎಂ ಮೊದಲ ಹಂತ,
  ಬೆಂಗಳೂರು-೫೬೦೦೬೮.

- **ಡಾ. ಡಿ.ವಿ. ಪರಮಶಿವಮೂರ್ತಿ**
  ಅಧ್ಯಕ್ಷರು
  ಡಾ. ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ
  ತುಮಕೂರು ವಿಶ್ವವಿದ್ಯಾಲಯ
  ತುಮಕೂರು

■

# ‘ಇತಿಹಾಸ ದರ್ಪಣ’ಕ್ಕೆ ಪ್ರಬಂಧವನ್ನು ಕಳುಹಿಸುವ ಮುನ್ನ...

‘ಇತಿಹಾಸ ದರ್ಪಣ’ಕ್ಕೆ ಸಂಶೋಧನ ಪ್ರಬಂಧವನ್ನು ಕಳುಹಿಸುವವರು ಈ ಕೆಳಕಂಡ ಂಗಳನ್ನು ಪಾಲಿಸಬೇಕು.

ಪ್ರಬಂಧವು ಅಪ್ರಕಟಿತವಾಗಿರಬೇಕು ಮತ್ತು ನವ ಶೋಧನೆ, ವಿನೂತನ ವಿಶ್ಲೇಷಣೆ, ಆಲೋಚನೆ ಹಾಗೂ ಸಂಶೋಧನಾ ವಿಧಾನಗಳಿಂದಾಗಿ ಹೊಸತನದಿಂದ ಕೂಡಿದ ಮತ್ತು ಚರಿತ್ರೆಯ ಅಧ್ಯಯನದ ಮೇಲೆ ಹೊಸ ಬೆಳಕು ಚೆಲ್ಲುವ ಪ್ರಬಂಧವಾಗಿರಬೇಕು.

ಪ್ರಬಂಧವನ್ನು ‘ನುಡಿ’ ತಂತ್ರಾಂಶದಲ್ಲಿ ಬೆರಳಚ್ಚು ಮಾಡಿ ಇ-ಮೇಲ್ ಮಾಡುವುದು ಹೆಚ್ಚು ಸೂಕ್ತವಾಗಿರುತ್ತದೆ. ಉಲ್ಲೇಖದ ಟಿಪ್ಪಣಿಗಳನ್ನು ಪ್ರಬಂಧದ ಪಾಠ ಮಧ್ಯದಲ್ಲಿಯೇ ಆರವಣ ()ದಲ್ಲಿ ಸಂಕ್ಷಿಪ್ತವಾಗಿ ಲೇಖಕರ ಪೂರ್ವನಾಮ, ಕೃತಿ / ಲೇಖನ ಪ್ರಕಟವಾದ ವರ್ಷ ಮತ್ತು ಪುಟ ಸಂಖ್ಯೆಗಳನ್ನು ನೀಡಬೇಕು [ಉದಾ: (ಶೆಟ್ಟರ್ ೨೦೦೭: ೧೨೬). ಇದು ಶೆಟ್ಟರ್, ಷ. ಅವರ ೨೦೦೭ರಲ್ಲಿ ಪ್ರಕಟವಾದ *ಶಂಗ ತಮಿಳಗಂ ಮತ್ತು ಕನ್ನಡ ನಾಡು-ನುಡಿ* ಕೃತಿಯ ೧೨೬ನೇ ಪುಟವನ್ನು ಉಲ್ಲೇಖಿಸುತ್ತದೆ].

ಹೆಚ್ಚಿನ ಮಾಹಿತಿ ಅಥವಾ ವಿವರಣೆಯನ್ನು ನೀಡಬೇಕಾಗಿದ್ದಲ್ಲಿ * # ಅಥವಾ ೧, ೨, ೩ ಸಂಕೇತಗಳನ್ನು ಬಳಸಿ ಅಡಿಟಿಪ್ಪಣಿ ರೂಪದಲ್ಲಿ ಕೊಡಬೇಕು. ಪ್ರಬಂಧದ ಅಂತ್ಯದಲ್ಲಿ ಉಲ್ಲೇಖದ ಟಿಪ್ಪಣಿಗಳನ್ನು ಒಳಗೊಂಡ ವಿಸ್ತೃತವಾದ ಪರಾಮರ್ಶನ ಗ್ರಂಥಗಳ ಪಟ್ಟಿ (Reference Books) ಯನ್ನು ಕನ್ನಡ ಮತ್ತು ಇಂಗ್ಲಿಷ್‌ಗಳಲ್ಲಿ ಪ್ರತ್ಯೇಕವಾಗಿ ನೀಡಬೇಕು. ಅದನ್ನು ನೀಡುವಾಗ ಮೊದಲು ಕೃತಿಕಾರರ ಹೆಸರು. ಪ್ರಕಟಣ ವರ್ಷ. ಕೃತಿಯ ಹೆಸರು ಓರೆ ಅಕ್ಷರಗಳಲ್ಲಿ. ಸ್ಥಳ. ಪ್ರಕಾಶಕರು. ಈ ಕ್ರಮದಲ್ಲಿಯೇ ಇರಬೇಕು. [ಉದಾ: ಶೆಟ್ಟರ್, ಷ. ೨೦೦೭. *ಶಂಗ ತಮಿಳಗಂ ಮತ್ತು ಕನ್ನಡ ನಾಡು-ನುಡಿ*. ಬೆಂಗಳೂರು. ಅಭಿನವ.] ನಿಯತಕಾಲಿಕೆಯ ಲೇಖನಗಳನ್ನು ಉಲ್ಲೇಖಿಸುವಾಗ ಉದಾ: ದೇವದೇವನ್, ಮನು ವಿ. ೨೦೧೦. ‘ನಾನೆ ಖಲಂದರ್ ನಾನೇ ಖಲೀಫಾ’, ಇತಿಹಾಸ ದರ್ಪಣ ೧ (೪): ೭೬-೭೯ (ಸಂಪುಟ (ಸಂಚಿಕೆ) : ಪುಟಗಳು) ಕ್ರಮವನ್ನು ಅನುಸರಿಸಬೇಕು. ಸಂಪಾದಿತ ಕೃತಿಯೊಂದರ ಲೇಖನವಾಗಿದ್ದರೆ ಮೇಲಿನ ಕ್ರಮಗಳನ್ನೇ ಅನುಸರಿಸಬೇಕು. ಆದರೆ ಸಂಪುಟ ಮತ್ತು ಸಂಚಿಕೆಯ ಬದಲಿಗೆ ಸಂಪಾದಕರ ಹೆಸರನ್ನು ಆವರಣದಲ್ಲಿ ನೀಡಬೇಕು. ಉದಾ:ಗೆ (ಸಂ. ಹಂ.ಗು.ರಾಜೇಶ್).

ಪ್ರಬಂಧಕ್ಕೆ ಪೂರಕವಾದ ಚಿತ್ರಗಳನ್ನು ಕಳುಹಿಸಿಕೊಡಬಹುದು. ಅವುಗಳಿಗೆ ಕಡ್ಡಾಯವಾಗಿ ಚಿತ್ರ ಶೀರ್ಷಿಕೆಗಳನ್ನು ನೀಡಿರಬೇಕು.

ಪ್ರಕಟಣೆಗೆ ಬರುವ ಪ್ರಬಂಧಗಳನ್ನು ಪೂರ್ವಾವಲೋಕನಕ್ಕಾಗಿ ತಜ್ಞರಿಗೆ ಕಳುಹಿಸಿ ಕೊಡಲಾಗುವುದು. ಆಯ್ಕೆಯಾದ ಪ್ರಬಂಧಗಳನ್ನು ಪ್ರಕಟಣಾ ಪೂರ್ವದಲ್ಲಿಯೇ ಲೇಖಕರಿಗೆ ತಿಳಿಸಲಾಗುವುದು.

ಪ್ರಬಂಧಗಳನ್ನು **‘itihasadarpana@gmail.com’**ಗೆ ಇ-ಮೇಲ್ ಮಾಡುವುದು.

**-ಸಂಪಾದಕರು**

ಕನ್ನಡದಲ್ಲಿ ಇತಿಹಾಸ ಸಂಶೋಧನೆಗೆ ಮೀಸಲಾದ ಏಕೈಕ ತ್ರೈಮಾಸಿಕ ನಿಯತಕಾಲಿಕೆ- 'ಇತಿಹಾಸ ದರ್ಪಣ'. ತನ್ನ ಶೈಶವಾವಸ್ಥೆಯಿಂದಲೇ ನಾಡಿನ ವಿದ್ವಜ್ಜನರ ಮೆಚ್ಚುಗೆಗೆ ಪಾತ್ರವಾಗಿರುವ ಈ ನಿಯತಕಾಲಿಕೆಯು ಇಂದು ಬಹುದೂರ ಸಾಗಿಬೆಳೆದಿದೆ. ಪ್ರತಿಷ್ಠಿತ **ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತು** ಸಂಸ್ಥೆಯು 'ಇತಿಹಾಸ ದರ್ಪಣ'ವನ್ನು ಮಾನ್ಯಮಾಡಿ, ಆರ್ಥಿಕ ನೆರವು ನೀಡುತ್ತಾ ಬರುತ್ತಿದೆ. ಪ್ರಸ್ತುತ ಐದನೆಯ ವಸಂತಕ್ಕೆ ಕಾಲಿರಿಸಿರುವ 'ಇತಿಹಾಸ ದರ್ಪಣ'ಕ್ಕೆ **ISSN** ಸಂಖ್ಯೆ ದೊರೆತಿದ್ದು, ಮತ್ತೊಂದು ಗರಿಮೆಯನ್ನು ಮುಡಿಗೇರಿಸಿಕೊಂಡಿದೆ ಎಂಬುದು ಹೆಮ್ಮೆಯ ಸಂಗತಿ.



ಬೆಂಬಲ ಬೆಲೆ : ₹ ೬೦

ಮುಖಪುಟ ಚಿತ್ರ :

1. ಸಾವನದುರ್ಗದ ಇಟ್ಟಿಗೆಬೈಲಿನ ಉತ್ಖನನದಲ್ಲಿ ದೊರೆತ ಬೃಹತ್ ಶಿಲಾ ಸಮಾಧಿ.
2. ಅಲ್ಲಿಯೇ ದೊರೆತ ಕಪ್ಪು ಮತ್ತು ಕೆಂಪು ದ್ವಿವರ್ಣದ ಬಟ್ಟಲು.